# ರಾಜನಂದಿನಿ.

(ಕಲ್ಪಿತ ಕಾದಂಬರಿ.)



ಲೇಖಕ:—

ಕೃಷ್ಣ ಹರಿ ಕುಲಕರ್ಣಿ,

ಕನವಳ್ಳಿ.



ಪ್ರಕಾಶಕ:—

ರಾಮಚಂದ್ರ ತ್ರ್ಯಂಬಕ ಕರ್ಪೂರ,

ವ್ಯಾ. ಸ. ಚ., ಆನಂದವನ.



೧೯೨೮

(ಪ್ರಥಮ ಮುದ್ರಣ)

ಬೆಲೆ ೧೦ ಆಣೆ.

# ಪ್ರಸ್ತಾವನೆ.

ಲೇಖನ ಕಲೆಯು ಒಂದು ಸ್ವತಂತ್ರ ಕಲೆಯಾಗಿದೆ. ಈ ಕಲೆಯ ಅಭಿರುಚಿಯಿಲ್ಲದ ಯಾವನೊಬ್ಬ ಭಾಷಾಪಂಡಿತನಿಂದ ಲೇಖನ ವ್ಯವಸಾಯವು ಸರಿಯಾಗಿ ನಡೆಯಲಾರದು. ಈ ಕಲೆಯಲ್ಲಿ ಸ್ವಾಭಾವಿಕ ಅಭಿರುಚಿಯಿದ್ದು ಭಾಷಾಪಾಂಡಿತ್ಯವನ್ನು ಸಂಪಾದಿಸಿದವರಿಗೆ ಮಾತ್ರ ಈ ಕಲೆಯಲ್ಲಿ ಸಹಜವಾಗಿ ಉತ್ಕರ್ಷವನ್ನು ಹೊಂದಲಿಕ್ಕೆ ಮಾರ್ಗಸಿಗುವದು. ಅವರೇ ಉತ್ತಮ ಲೇಖಕರಾಗುವರು. ಈ ಹುಟ್ಟುಗುಣವುಳ್ಳವನೇ ಲೇಖಕ ವ್ಯವಸಾಯಕ್ಕೆ ಅರ್ಹನು.

ಪ್ರಸ್ತುತ ಕಾದಂಬರಿಯನ್ನು ಬರೆದ ರಾ. ರಾ. ಕೃಷ್ಣ ಹರಿ ಕುಲಕರ್ಣಿ, ಇವರಲ್ಲಿ ಇಂಥ ಹುಟ್ಟುಗುಣವಿದೆಯೆಂಬದು ನಮ್ಮ ವಾಚಕರಿಗೆ ಮನವರಿಕೆಯಾಗಬಹುದು. ರಾ. ರಾ ಕೃಷ್ಣ ಹರಿ ಇವರು ಚಿಕ್ಕವಯಸ್ಸಿನವರಿದ್ದು, ಇದೇ ಇವರ ಪ್ರಥಮ ಪ್ರಯತ್ನವಾಗಿರುವದು. ಇವರು ಮಾತೃಭಾಷೆಯಲ್ಲಿ (ಕನ್ನಡ) ತಕ್ಕಮಟ್ಟಿಗೆ ಪ್ರಾವೀಣ್ಯತೆಯನ್ನು ಸಂಪಾದಿಸಿ ಈಗ ರಾಜಭಾಷೆಯನ್ನು ಅಭ್ಯಾಸಿಸುತ್ತಿರುವರು. ಇವರು ಭಾಷಾಪಾಂಡಿತ್ಯವನ್ನು ಸಂಪಾದಿಸಿ ಲೇಖನ ವ್ಯವಸಾಯವನ್ನು ನಡಿಸಿದರೆ ಯಶಸ್ಸಿಗೆ ಪಾತ್ರರಾಗುವರೆಂಬದರಲ್ಲಿ ಸಂದೇಹವಿಲ್ಲ.

ಈ ಕಾಲ್ಪನಿಕ ಕಾದಂಬರಿಯನ್ನು ಪ್ರಸ್ತುತದ ಲೇಖಕರು ಸ್ವತಂತ್ರವಾಗಿ ಬರೆದಿರುವರು ಇದು ಯಾವದೊಂದು ಕಾದಂಬರಿಯ ಭಾಷಾಂತರವಾಗಿರುವದಿಲ್ಲ ಆರ್ಯಮಹಿಳೆಯರ ಶೀಲ, ವಿಷಯಲಂಪಟರಿಗಾಗುವ ಈಶ್ವರೀಶಿಕ್ಷೆ, ಕುಸಂಗತಿಯ ಫಲ, ಭಾರತೀಯರ ಸತ್ಯಪ್ರತಿಜ್ಞತ್ವ ಇತ್ಯಾದಿ ಸಂಗತಿಗಳನ್ನು ಪ್ರದರ್ಶಿಸುವದೇ ಲೇಖಕರ ಉದ್ದೇಶವಾಗಿದೆ; ಆದರೆ ಇದೇ ಪ್ರಥಮ ಪ್ರಯತ್ನವಾದ್ದರಿಂದ ಎಲ್ಲ ರಸಗಳೂ ಅಷ್ಟೊಂದು ತೃಪ್ತಿಕರವಾಗಿ ಸಾಧಿಸಿಲ್ಲವೆಂದು ಹೇಳುವ ಕಾರಣವಿಲ್ಲ. ಮುಖ್ಯವಾಗಿ ಲೇಖನ ವ್ಯವಸಾಯದ ಜೀವಾಳವು ಈ ಲೇಖಕರಲ್ಲಿದ್ದದರಿಂದ ಅವರ ಕೈಬರಹದ ಪ್ರತಿಯನ್ನು ಸಾಧ್ಯವಾದ ಮಟ್ಟಿಗೆ ತಿದ್ದಿ, ಅವರ ಉತ್ತೇಜನಾರ್ಥವಾಗಿ ಪ್ರಸಿದ್ಧಪಡಿಸಿರುತ್ತದೆ. ಕನ್ನಡ ಭಾಷಾಮಾತೆಯ ಸೇವೆಯಲ್ಲಿ ಪ್ರವೇಶಿಸತೊಡಗಿರುವ ಈ ಬಾಲಲೇಖಕರಲ್ಲಿ ಯಾವ ಗುಣಾಂಶವಿದೆಯೆಂಬದನ್ನು ನಮ್ಮ ರಸಜ್ಞ ವಾಚಕರೇ ತರ್ಕಿಸತಕ್ಕದ್ದು.

ಪ್ರಕಾಶಕ,

ಶ್ರೀಕ್ಷೇತ್ರ ಆನಂದವನ,<br>ತಾ|| ೬-೬-೧೯೨೮

ರಾ. ತ್ರ್ಯ. ಕರ್ಪೂರ<br>ಮ್ಯಾ. ಸ. ಚ.

# ರಾಜನಂದಿನಿ.



## ೧ನೇ ಪ್ರಕರಣ—ಪಠಾಣರು!



ಪ್ರಶಸ್ತವಾದ ನದೀ ತೀರವು, ಸುತ್ತಲೂ ಶಾಂತಿಯ ಸಾಮ್ರಾಜ್ಯವು ನೆಲೆಗೊಂಡಿದೆ; ನದಿಯ ದಂಡೆಯಲ್ಲಿ ಅನೇಕ ಫಲವೃಕ್ಷಗಳಿಂದ ಸ್ವಾಭಾವಿಕವಾಗಿ ಆದ ಸುಂದರ ಬನವು ಒಪ್ಪುತ್ತಲಿದೆ; ಆಳವಾದ ಮಡುವುಗಳಲ್ಲಿಯು ಕಮಲಗಳು ವಿಕಾಸಗೊಂಡು ಆಕಾಶದಲ್ಲಿಯ ನಕ್ಷತ್ರಗಳಂತೆ ಶೋಭಿಸುತ್ತವೆ; ಮಂದಮಾರುತನಿಂದ ಮರಾಳಗಳು ಉಲ್ಲಸಿತವಾಗಿ ಕ್ರೀಡಿಸುತ್ತವೆ; ಅಸ್ತಾಚಲವನ್ನೇರಿದ ಸೂರ್ಯನ ಹೊಂಬಣ್ಣದ ಕಿರಣಗಳು ಗಿಡಗಳ ಚಿಗುರೆಲೆಗಳ ಮೇಲೆ ಬಿದ್ದು ಪ್ರೇಕ್ಷಕರನ್ನು ಆನಂದಗೊಳಿಸುತ್ತವೆ. ಕಮಲದಲ್ಲಿದ್ದ ಪರಿಮಳವು ನೀರಿನ ತುಂತುರು ಹನಿಗಳಲ್ಲಿ ಬೆರೆತು, ಸುಳಿಗಾಳಿಯಿಂದ ಪಸರಿಸಿ ಸುಂದರ ಬನವನ್ನೇ ಸುಗಂಧಮಯವಾಗಿ ಮಾಡಿದೆ. ಬಹಳ ಹೇಳುವದೇನು? ಪುಣ್ಯತಮವಾದ ಆ ಪವಿತ್ರ ನದೀತೀರವು ಇಂದ್ರನ ನಂದನವನದಂತೆ ಭಾಸವಾಗುತ್ತಿತ್ತು.

ಇಂಥ ಮನೋಹರವಾದ ನದಿಯ ದಂಡೆಯ ಸುಂದರ ಬನದಲ್ಲಿ ಯಾರೋ ಇಬ್ಬರು ಮಾತಾಡುತ್ತ ಕುಳಿತಿದ್ದರು. ಅವರಿಬ್ಬರೂ ಬೆಲೆಯುಳ್ಳ ಅರಿವೆಗಳನ್ನು ಧರಿಸಿದ್ದರು. ಅವರ ಉದ್ದನ್ನ ಕೆಂಪು ಮುಖವೂ, ಎದೆಯವರೆಗೆ ಇಳಿಬಿದ್ದ ಗಡ್ಡದ ಕೂದಲುಗಳೂ ಮುಖದ ಉಗ್ರತೆಯನ್ನು ಹೆಚ್ಚಿಸುತ್ತಿದ್ದವು. ಅವರು ತಲೆಗೆ ಶುಭ್ರವಾದ ಮುಂಡಾಸವನ್ನು ಸುತ್ತಿ ಮೈಯಲ್ಲಿ ಕಿನಕಾಫಿನ ಅಂಗಿಯನ್ನು ತೊಟ್ಟಿದ್ದರು. ಅವರು ಒಂದು ಸೈಲಾದ ಚಣ್ಣಾವನ್ನು ತೊಟ್ಟು, ಕಾಲಲ್ಲಿ ಜೋಡುಗಳನ್ನು ಮೆಟ್ಟಿದ್ದರು. ಅವರ ಬಳಿಯಲ್ಲಿ ಎರಡು ಕುದುರೆಗಳಿದ್ದವು. ಅವು ಆಗಾಗ್ಗೆ ಭುರುಗುಟ್ಟುತ್ತ, ಎದುರಿಗೆ ಬಿದ್ದ ಹುಲ್ಲನ್ನು ತಿನ್ನುತ್ತಿದ್ದವು. ಅವರಿಬ್ಬರೂ ಆ ಸುಂದರ ಬನದ ಸೊಬಗನ್ನು ಸ್ವಲ್ಪವೂ ಲಕ್ಷ್ಯಕ್ಕೆ ತಂದಂತೆ ಕಾಣ

ಲಿಲ್ಲ; ಆವುದೋ ಒಂದು ಗಹನ ವಿಚಾರದಲ್ಲಿ ತೊಡಗಿದಂತೆ ಕಾಣುತ್ತಿತ್ತು. ಹೊತ್ತು ಮುಳುಗುತ್ತ ಒಂದಿದ್ದರೂ ಒಬ್ಬರ ಮುಖದಿಂದಲೂ ಮಾತುಗಳು ಹೊರಡಲಿಲ್ಲ.

ತುಸ ಹೊತ್ತಿನಲ್ಲಿ ಒಬ್ಬನು ಮೌನವನ್ನು ಭಂಗಪಡಿಸಿ—"ಉಸ್ಮಾನ, ನಾವು ಕೈಕೊಂಡ ಕೆಲಸವು ಕೊನೆಗಾಣುವಂತೆ ಕಾಣುವದಿಲ್ಲ; ಕಂದಹಾರದಿಂದ ಇಲ್ಲಿಯ ವರೆಗೆ ಒಂದದ್ದು ವ್ಯರ್ಥವೆಂದು ತೋರುತ್ತದೆ ವಿದೇಹರಾಜನಾದ ಸಿಂಹಕೇತುವು ಸಾಮಾನ್ಯನಲ್ಲ; ಮಹಾಧೂರ್ತನೂ, ಶೂರನೂ ಇರುವನು! ಅವನ ಮುಂದೆ ನಮ್ಮ ಆಟವು ನಡೆಯಲಾರದು. ಮಿಥಿಲಾನಗರದ ವಾರ್ತೆಯನ್ನು ತಿಳಿದುಕೊಂಡು ಬರುವದಕ್ಕೆಂದು ಕಳಿಸಿದ ಅಬ್ದುಲನೂ ಬರಲಿಲ್ಲ; ಅವನು ಯಾಕೆ ಬಂದಿರಲಿಕ್ಕಿಲ್ಲ? ಆತನು ಶತ್ರುಗಳ ಕೈಯಲ್ಲಿ ಸಿಕ್ಕರೆ ನಮ್ಮ ಸರ್ವಸ್ವದ ಘಾತವಾಗುತ್ತದೆ. (ಧೈರ್ಯತಂದುಕೊಂಡು) ಛೀ, ಅವನು ಶತ್ರುಗಳ ವಶನಾಗತಕ್ಕವನಲ್ಲ. ಅನೇಕ ಗುಪ್ತಸಂಗತಿಗಳ ಪರಿಚಯದ ಸಲುವಾಗಿ ನಿಂತಿರಬಹುದು. ನಿಜಸಂಗತಿಯು ಏನಿರುವದೆಂಬದು ಪರವರದಿಗಾರ ಅಲ್ಲಾನಿಗೇ ಗೊತ್ತು!!"

ಇದನ್ನು ಕೇಳಿ ಉಸ್ಮಾನಖಾನನು—"ದೊರೆಯೇ, ಎಷ್ಟು ಚಿಂತಿಸುವಿಯಲ್ಲ? ಶೂರರಾದ ಅಫಗಾನರ ಮುಂದೆ ಆ ಕಾಫರರಾದ ಹಿಂದುಗಳ ಪಾಡೇನು? ಆ ಒಬ್ಬ ತರುಣಿಯನ್ನು ತರಲಿಕ್ಕೆ ಇಷ್ಟು ಚಿಂತೆಯೇಕೆ? ಅಬ್ದುಲನು ಬರುವ ಹೊತ್ತಾಗಿದೆ; ಚಿಂತೆಯನ್ನು ಬಿಡು, ಧೈರ್ಯವತಾಳು. ಇನ್ನು ೨-೩ ದಿನಗಳಲ್ಲಿಯೇ ಆ ತರುಣಿಯನ್ನು ನಿನಗೊಪ್ಪಿಸುತ್ತೇವೆ" ಎಂದನು.

ವಾಚಕರೇ, ಇವರ ಸಂಭಾಷಣದಿಂದ ಇವರು ಬಂದ ಉದ್ದೇಶವು ನಿಮಗೆ ಗೊತ್ತಾಗಿರಬಹುದು; ಇವರೀರ್ವರೂ ಈಗ ಅಫಗಾನಿಸ್ತಾನವೆಂದು ಕರೆಯಲ್ಪಡುವ ದೇಶದವರು. ಇವರು ವಿದೇಹರಾಜನ ಮಗಳಾದ ಕಮಲೆಯನ್ನು ಅಪಹರಿಸಬೇಕೆಂಬ ಉದ್ದೇಶದಿಂದ ಬಂದಿರುವರು. ಇವರಲ್ಲಿ ಕಂದಹಾರದ ಅರಸುಮಗನಾದ ರಹಿಮಾನನೇ ಮುಖ್ಯನು. ಇವನು ತನ್ನ ಸಂಗಡ ಉಸ್ಮಾನನೆಂಬ ಮಂತ್ರಿಯ ಮಗನನ್ನೂ, ಕೆಲವು ಸೈನ್ಯವನ್ನೂ ತೆಗೆದುಕೊಂಡು ಬಂದಿದ್ದನು. ಇವನು ಇಲ್ಲಿಗೆ ಬಂದು ೮-೧೦ ದಿನಗಳವರೆಗೆ ವಿದೇಹರಾಜನ ಕೂಡ ತಂತ್ರವನ್ನು ಹೂಡಿದನು. ಆದರೂ ಕಾರ್ಯವಾಗಲಿಲ್ಲ. ಕಡೆಗೆ

ಅಬದುಲನೆಂಬ ಸರದಾರನನ್ನು ಮಿಥಿಲಾನಗರಿಗೆ ಗುಪ್ತಹೇರನನ್ನಾಗಿ ಕಳಿಸಿದ್ದನು.

ಹೀಗೆ ಉಸ್ಮಾನ-ರಹಿಮಾನರು ಕೆಲವು ಹೊತ್ತಿನ ವರೆಗೆ ಮಾತಾಡುತ್ತ ಕುಳಿತಿದ್ದರು. ಸೂರ್ಯನು ಮುಳುಗಿ ತಾಸೆರಡು ತಾಸಾಯಿತು. ಚಂದ್ರನ ಶಾಂತ ಕಿರಣಗಳು ಎಲ್ಲ ಕಡೆಗೂ ಪಸರಿಸಿದ್ದವು. ಹಿಟ್ಟುಚಲ್ಲಿದ ಹಾಗೆ ಬೆಳದಿಂಗಳು ಬಿದ್ದಿತ್ತು. ಪಕ್ಷಿಗಳೆಲ್ಲ ತಮ್ಮ ತಮ್ಮ ಗೂಡುಗಳನ್ನು ಸೇರಿದವು. ಕುದುರೆಗಳು ಹುಲ್ಲನ್ನು ತಿಂದು ಸುಮ್ಮನೇ ನಿಂತಿದ್ದವು. ಎಲ್ಲ ಕಡೆಗೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿತ್ತು. ಆದರೆ ಇವರೀರ್ವರ ಮನಸ್ಸು ಶಾಂತ ವಿದ್ದಿಲ್ಲ. ಅವರು ಹೆಚ್ಚುಹೆಚ್ಚು ಚಿಂತಾಮಗ್ನರಾಗಹತ್ತಿದರು. ಆಗ ರಹಿಮಾನನು ಏನೋ ಮಾತಾಡಬೇಕೆನ್ನುತ್ತಿರಲು, ಕುದುರೆಯ ಖುರಪುಟಗಳ ಸಪ್ಪಳವು ಕೇಳಬರಹತ್ತಿತು. ಆಗ ಅವರಿಬ್ಬರೂ ಎದ್ದು ನಿಂತು, ಅತ್ತ ದಿಟ್ಟಿಸಿ ನೋಡಹತ್ತಿದರು. ಸಪ್ಪಳವು ಹೆಚ್ಚು ನಿಚ್ಚಳವಾಗಿ ಕೇಳಹತ್ತಿತು. ಅಷ್ಟರಲ್ಲಿ ಅಬ್ದುಲನು ಒತ್ತರದಿಂದ ಕುದುರೆಯನ್ನು ಓಡಿಸುತ್ತ ಇವರಿದ್ದೆಡೆಗೆ ಬಂದನು. ಆ ಮೇಲೆ ಅವನು ಕುದುರೆಯಿಂದಿಳಿದು, ಅದನ್ನು ಒಂದು ಗಿಡಕ್ಕೆ ಕಟ್ಟಿ, ಸ್ವಲ್ಪ ಹುಲ್ಲನ್ನು ಒಗೆದು ದಣುವಾರಿಸಿಕೊಂಡನು. ತರುವಾಯ ರಹಿಮಾನನು ಅಬ್ದುಲನನ್ನು ಕುರಿತು—"ಅಬ್ದುಲ, ನೀನು ಬರಲಿಕ್ಕೆ ಇಷ್ಟೇಕೆ ತಡವಾಯಿತು? ಉಳಿದವರೆಲ್ಲಿರುವರು? ಮಿಥಿಲಾನಗರದ ವಾರ್ತೆಯೇನು?" ಎಂದು ಕೇಳಿದನು.

ಅದಕ್ಕೆ ಅಬ್ದುಲನು—"ಖಾವಿಂದ, ಏನು ಹೇಳಲಿ? ಆ ಕಾಫರರಾದ ಹಿಂದುಗಳು ನಮ್ಮನ್ನು ದಾರಿಯಲ್ಲಿಯೇ ಮುತ್ತಿದರು. ನಾವೆಲ್ಲರೂ ಅತಿ ಶೌರ್ಯದಿಂದ ಕಾದಿದೆವು. ಹಿಂದುಗಳು ಬಹು ಜನರಿದ್ದದರಿಂದ ನಮ್ಮ ಸೈನಿಕರೆಲ್ಲ ಯುದ್ಧದಲ್ಲಿ ಮಡಿದರು. ಬಹು ಪ್ರಯಾಸದಿಂದ ನಾನೊಬ್ಬನೇ ತಪ್ಪಿಸಿಕೊಂಡು ಬರಬೇಕಾದರೆ ಸಾಕಾಗಿಹೋಯಿತು! ಇನ್ನೆರಡು ದಿನಗಳಲ್ಲಿ ಮಿಥಿಲಾ ನಗರಿಯ ರಾಜಪುತ್ರಿಯ ಸ್ವಯಂವರವು ನಡೆಯುತ್ತದೆ. ಆದುದರಿಂದ ನಮ್ಮ ಕಾರ್ಯವನ್ನು ತೀವ್ರ ಮಾಡಿದಷ್ಟು ಉತ್ತಮವು. ನಮ್ಮ ದೊಡ್ಡ ಸೈನ್ಯವೆಲ್ಲ ಇಲ್ಲಿಂದ ಒಂದು ಮೈಲಿನ ಮೇಲೆ ಅದೆ. ಅಲ್ಲಿ ಎಲ್ಲ ವ್ಯವಸ್ಥೆಯೂ ಚನ್ನಾಗಿದೆ."

ಹೀಗೆ ಅವರಲ್ಲಿ ಸಂಭಾಷಣವು ನಡೆದಿರಲು, ಮುಂಭಾಗದ ಗಿಡಗಳ ಗುಂಪಿನಲ್ಲಿ ದೂರದಲ್ಲಿ ಯಾರೋ ಗುಣುಗುಣು ಮಾತಾಡಿದಂತೆ ಕೇಳಬಂದಿತು. ಆಗ ಅವರೆಲ್ಲರು ಒಳ್ಳೇ ಉತ್ಸಾಹದಿಂದ ಅತ್ತಕಡೆಗೆ ಲಕ್ಷಗೊಟ್ಟು ಕೇಳತೊಡ

ಗಿದರು. ಅಂಥ ಪ್ರಶಾಂತ ಸಮಯವಾದರೂ, ಮಂದಮಾರುತನು ಹೊತ್ತು ತಂದ ಆ ಗುಪ್ತಸಂಗತಿಯು ಇವರಿಗೆ ಸ್ಪಷ್ಟವಾಗಿ ಹೇಗೆ ಕೇಳಿಸಬೇಕು? ಯಾವ ದೊಂದು ಸಂಗತಿಯು, ಅಥವಾ ಯಾವದೊಂದು ಪದಾರ್ಥವು ಗುಪ್ತವಿದ್ದ ಅದನ್ನು ಕೇಳುವ, ಅಥವಾ ನೋಡುವ ಕುತೂಹಲವು ಮನುಷ್ಯ ಪ್ರಾಣಿಗಳಲ್ಲಿ ಸ್ವಾಭಾವಿಕವಾಗಿ ಹುಟ್ಟುತ್ತದೆ. ಅದರಂತೆ ಆ ಮೂವರೂ ಯವನರು ಈ ಮಾತುಗಳನ್ನು ತಿಳಿದುಕೊಳ್ಳುವದಕ್ಕಾಗಿ ಕುತೂಹಲವುಳ್ಳವರಾಗಿ ಅತ್ತಕಡೆ ಸಾಗಿದರು; ಮತ್ತು ಒಂದು ಗಿಡದ ಮರೆಗೆ ನಿಂತು ಅವರ ಮಾತುಗಳನ್ನು ಕೇಳ ಹತ್ತಿದರು. ವಾಚಕರೇ, ನಾವೂ ಅತ್ತಕಡೆಗೆ ಹೋಗೋಣ ನಡೆಯಿರಿ.

ಮಿತ್ರಾ, ಚಂದ್ರಕಾಂತಾ, ಈ ಪ್ರೊತ್ತಿನ ಪ್ರಸಂಗವನ್ನು ನೋಡಿದೆಯಾ? ನಾನು ಗುಪ್ತವೇಷದಿಂದ ಮುಸಲ್ಮಾನರ ಪಾಳಯವನ್ನು ಪ್ರವೇಶಿಸಿ, ಅವರು ಬಂದ ಉದ್ದೇಶವನ್ನು ಅರಿತಿರುವೆನು. ಅವರು ರಾಜಪುತ್ರಿಯಾದ ಕಮಲಾ ದೇವಿಯನ್ನು ಹಿಡಿದೊಯ್ಯುವರಂತೆ! ಈ ಮಾತು ಅವರಿಗೆ ಸುಲಭವಾಗಿ ತೋರು ತ್ತಿರಬಹುದು. ಆದರೆ ನಮ್ಮರಸು ಸಾಮಾನ್ಯನಲ್ಲ; ಅರಸನಂತೂ ಇರಲಿ, ನನ್ನ-ನಿನ್ನಂಥ ಧೀರರು ದೊರೆಯಲ್ಲಿ ಚಾಕರರಿಲು ಅದಾವನು ರಾಜಪುತ್ರಿ ಯನ್ನು ಅಪಹರಿಸುವನು? ಭಾರತಮಾತೆಯ ಪುತ್ರರು ಕೈಯಲ್ಲಿ ಬಳೆ ಇಟ್ಟಿರು ವರೇ? ಆರ್ಯಪುತ್ರಿಯರ ಪಾತಿವ್ರತ್ಯದ ಪ್ರಭಾವವು ಆ ಯವನರಿಗೆ ಗೊತ್ತಾ ದಂತೆ ಕಾಣುವದಿಲ್ಲ! ಇರಲಿರಲಿ; ಇಂದಿನ ಯುದ್ಧದಲ್ಲಿ ಯವನರನ್ನು ಪೂರ್ಣ ಸೋಲಿಸಿದೆವು! ಒಬ್ಬನೇ ತಪ್ಪಿಸಿಕೊಂಡು ಹೋದನು. ಅವನು ತನ್ನವರಿಗೆ ಸುದ್ದಿಯನ್ನರುಹಲು, ಯವನರು ಸಂಪೂರ್ಣ ಎಚ್ಚರಾಗುವರು. ಈ ಸುದ್ದಿಯು ನಮ್ಮ ದೊರೆಗೆ ತಿಳಿದಂತೆ ಕಾಣುವದಿಲ್ಲ ಪಾಪ! ಆ ದೊರೆಗೆ ಇದೇನುಗೊತ್ತು? ಅವನು ಸಂಭ್ರಮದಿಂದ ಮಗಳ ಸ್ವಯಂವರದಲ್ಲಿ ತೊಡಗಿರುವನು. ಅವನಿಗೆ ಈ ಸುದ್ದಿಯನ್ನು ಬೇಗನೆ ತಿಳಿಸಬೇಕು. ಇಲ್ಲದಿದ್ದರೆ ಕಾರ್ಯವು ಕೆಟ್ಟು ಹೋ- ಗುವ ಸಂಭವವಿದೆ”...........

ಹೀಗೆಂದು ಅವರು ಮಾತಾಡುತ್ತಿರಲು, ಇತ್ತ ಯವನರು ವಿಸ್ಮಯದಿಂದ ಒಬ್ಬರ ಮೋರೆಯನ್ನೊಬ್ಬರು ನೋಡಹತ್ತಿದರು. ಕಡೆಗೆ ಅಬ್ದುಲನು ಮೆಲ್ಲಗೆ ರಹಿಮಾನನನ್ನು ಕುರಿತು—“ಖಾವಿಂದ, ಇವರನ್ನು ಹಾಗೇ ಹೋಗಗೊಡು ವದು ಯುಕ್ತವಲ್ಲ. ಇವರನ್ನು ಹಾಗೆಯೇ ಬಿಟ್ಟರೆ ನಮ್ಮ ಕಾರ್ಯವು ನಿಶ್ಚಯ

ವಾಗಿ ಘಾತವಾಗುವದು. ಆದುದರಿಂದ ಇವರನ್ನು ಬಂಧಿಸಿ, ನಮ್ಮ ಪಾಳಯಕ್ಕೆ ಒಯ್ಯಬೇಕು. ಇನ್ನೂ ವಿದೇಹದೊರೆಗೆ ನಾವು ಬಂದದ್ದು ಗೊತ್ತಿಲ್ಲ; ಗೊತ್ತಾದರೆ ಅವನು ಒಳ್ಳೇ ಎಚ್ಚರಿಕೆಯಿಂದಿದ್ದು ನಮ್ಮನ್ನು ನಾಶಗೊಳಿಸದೆ ಇರನು. ಆದ್ದರಿಂದ ತೀವ್ರ ನಡೆಯಿರಿ, ಅವರನ್ನು ಬಂಧಿಸಿರಿ,'' ಹೀಗೆಂದು ನುಡಿದು ಮೂವರು ಒಟ್ಟಾಗಿ ಒಂದು ಅವರನ್ನು ಮುತ್ತಿದರು.

ಅಕಸ್ಮಾತ್ತಾಗಿ ತಮ್ಮನ್ನು ಯವನರು ಮುತ್ತಿದ್ದನ್ನು ಕಂಡು ಆ ಹಿಂದು ವೀರರು ಹೆದರಲಿಲ್ಲ; ಟೊಂಕದಲ್ಲಿದ್ದ ಖಡ್ಗಕ್ಕೆ ಕೈಹಾಕಿದರು. ಅಲ್ಲಿ ಖಡ್ಗವಿದ್ದಿಲ್ಲ! ಆಗ ಅವರ ಎದೆಯು ಕಂಪಿಸಿತು! ನಿಶ್ಶಸ್ತ್ರರಾದ ತಾವು ಪಾರಾಗುವ ಬಗೆ ಹೇಗೆಂದು ಚಿಂತಿಸಹತ್ತಿದರು. ಆಗ ರಹಿಮಾನನು ಅವರನ್ನು ಕುರಿತು—

"ನೀವು ನಮ್ಮ ಗುಪ್ತಕಾರಸ್ಥಾನವನ್ನು ಬೈಲಿಗೆಳೆಯಬೇಕೆಂದು ಮಾಡಿರುವಿರಷ್ಟೇ? ಇಲ್ಲಿಂದ ಪಾರಾದರೆ ಅದೆಲ್ಲ ಮಾತು! ನೀವು ನಮ್ಮ ಮುಸಲ್ಮಾನ ಸೈನಿಕರನ್ನು ಸೋಲಿಸಿದಂತೆ ಇಲ್ಲಿ ನಮ್ಮನ್ನು ಸೋಲಿಸುವ ಹಾಗಿಲ್ಲ; ನಿಮ್ಮ ಹತ್ತರ ಶಸ್ತ್ರಗಳೇ ಇಲ್ಲ. ಆದುದರಿಂದ ನೀವು ಇಲ್ಲಿಂದ ಪಾರಾಗಲಾರಿರಿ. ಸುಮ್ಮನೆ ನಮ್ಮ ಕೈವಶರಾಗಿರಿ. ಇಲ್ಲದಿದ್ದರೆ ನಮ್ಮ ಖಡ್ಗಕ್ಕೆ ನಿಮ್ಮ ಶಿರಗಳನ್ನು ಆಹುತಿ ಕೊಡಬೇಕಾದೀತು!'' ಎಂದು ನುಡಿದನು.

ಈ ಮಾತನ್ನು ಕೇಳಿ, ಅವರಿಬ್ಬರೂ ಯೋಚಿಸಹತ್ತಿದರು. ಅವರು ಒಂದು ಹಂಚಿಕೆ ಹುಡುಕಿ, ಯವನರ ವಶರಾದರು. ಆಗ ಮೂವರೂ ಅಫಗಾನರು ಅವರಿಬ್ಬರನ್ನು ಬಂಧಿಸಿಕೊಂಡು ತಮ್ಮ ಪಾಳಯದ ಕಡೆಗೆ ನಡೆದರು.

---

## ೨ನೇ ಪ್ರಕರಣ--ರಾಜನಂದಿನಿಯ ಹರಣ.

ಇಂದು ಮಿಥಿಲಾನಗರದಲ್ಲಿ ರಾಜಪುತ್ರಿಯ ಸ್ವಯಂವರವು; ನಗರವೆಲ್ಲ ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟಿತ್ತು. ಪ್ರಜೆಗಳೆಲ್ಲ ಆನಂದಸಂಭ್ರಮದಲ್ಲಿದ್ದರು. ಸೈನಿಕರು ವಸ್ತ್ರಾಭರಣ ಭೂಷಿತರಾಗಿದ್ದರು. ಸ್ವಯಂವರ ಮಂಟಪವು ಒಂದು ಮೈಲು ಉದ್ದವಾಗಿಯೂ, ಅರ್ಧ ಮೈಲು ಅಗಲವಾಗಿಯೂ ಇದ್ದಿತು. ಎಲ್ಲ ಕಡೆಯಲ್ಲಿ ಮಂಗಲಸೂಚಕ ಬಾಳೆಯಕಂಬಗಳು ಕಂಗೊಳಿಸು

ತ್ತಿದ್ದವು. ಮಂಟಪದ ಒಳಮುಗ್ಗಲಿಗೆ ರಾಜಪುತ್ರರು ಕುಳಿತುಕೊಳ್ಳುವದರ ಸಲುವಾಗಿ ನೀಲ-ಪಚ್ಚುಗಳನ್ನು ಕೆಚ್ಚಿದ ಆಸನಗಳು ಸಾಲು ಸಾಲಾಗಿ ಕಂಗೊಳಿ ಸುತ್ತಿದ್ದವು. ಪ್ರೇಕ್ಷಕರ ಸಲುವಾಗಿ ಬೇರೆ ಸ್ಥಳಗಳನ್ನು ಏರ್ಪಡಿಸಿದ್ದರು. ಸುವಾಸಿನಿಯರ ಸಲುವಾಗಿ ಬೇರೆ ಸ್ಥಳವು ನಿರ್ಮಿಸಲ್ಪಟ್ಟಿತ್ತು. ಎಲ್ಲ ಕಡೆಗೂ ಸೈನಿಕರ ಪಹರೆಯಿತ್ತು.

ಈ ಪ್ರಕಾರ ಸ್ವಯಂವರ ಮಂಟಪದಲ್ಲಿ ಸಿದ್ಧತೆ ನಡೆದಿರಲು, ಅತ್ತ ರಾಜ ಗೃಹದಲ್ಲಿ ರಾಜಪುತ್ರಿಯಾದ ಕಮಲಾದೇವಿಯು ರಾಜಸ್ತ್ರೀಯರೊಡನೆ ವಸ್ತ್ರಾ ಲಂಕಾರ ಭೂಷಿತಳಾಗಿ ಸ್ವಯಂವರ ಮಂಟಪವನ್ನು ಪ್ರವೇಶಿಸುವ ಯತ್ನದಲ್ಲಿ ದ್ದಳು. ಮಂಟಪದಲ್ಲಿ ಸಮಸ್ತ ರಾಜವೃಂದವು ವಜ್ರ-ವೈಢೂರ್ಯಾದಿ ಅಲಂ- ಕಾರಗಳಿಂದ ಭೂಷಿತವಾಗಿ ವಧುವಿನ ಆಗಮನವನ್ನು ನಿರೀಕ್ಷಿಸುತ್ತಿತ್ತು. ಪ್ರೇಕ್ಷಕರ ಸಮೂಹವಂತೂ ಲೆಕ್ಕವಿಲ್ಲದಷ್ಟು ಕೂಡಿತ್ತು. ನೆರೆದ ರಾಜ ರೆಲ್ಲರು ಸಿಂಹಾಸನಗಳ ಮೇಲೆ ಮಂಡಿಸಿದ್ದರು. ಹೆಣ್ಣುಮಕ್ಕಳು ದೂರದಲ್ಲಿ ನೋಡುತ್ತ ನಿಂತಿದ್ದರು. ಹೀಗೆ ಎತ್ತ ನೋಡಿದರೂ ಜನರು ವಧುವಿನ ಮಾರ್ಗ ಪ್ರತೀಕ್ಷೆಯನ್ನೇ ಮಾಡುತ್ತಿದ್ದರು. ಸೇವಕರು ಎಲ್ಲ ಕಡೆಗೂ ವ್ಯವಸ್ಥೆ ಗೊಳಿಸುತ್ತಿದ್ದರು.

ಆಗ ವಿದೇಹರಾಜನಾದ ಸಿಂಹಕೇತುವು ತನ್ನ ಮಗಳನ್ನು ಕರೆದುಕೊಂಡು ಮಂಟಪಕ್ಕೆ ಬಂದನು. ಆಗ ಎಲ್ಲ ಪ್ರೇಕ್ಷಕವೃಂದವು ಆನಂದದಿಂದ ಜಯ ಘೋಷ ಮಾಡಿತು. ಕೆಲವು ಹೊತ್ತಿನ ಮೇಲೆ ಸಭೆಯು ಸ್ತಬ್ಧವಾಯಿತು.

ಆಗ ಸರ್ವಾಲಂಕಾರ ವಿಭೂಷಿತಳಾದ ರಾಜಕುಮಾರಿಯು ಕೈಯಲ್ಲಿ ಹೂವಿನ ಹಾರವನ್ನು ತೆಗೆದುಕೊಂಡು, ಮಂದಗಮನದಿಂದ ರಾಜಪುತ್ರರನ್ನು ನೋಡುತ್ತ ಸಾಗಿದಳು. ಅವಳ ಮುಂದೆ ಧಿಟ್ಟ ದಾಸಿಯು ರಾಜಪುತ್ರರ ಹೆಸರು ಗೊಂಡು ಅವರ ಗುಣಗಾನ ಮಾಡುತ್ತ ಹೊರಟ್ಟಿದ್ದಳು. ಆ ಸೌಂದರ್ಯಶಾ ಲಿನಿಯಾದ ರಾಜಪುತ್ರಿಯನ್ನು ಪ್ರೇಕ್ಷಕರು ಅತ್ಯುತ್ಸುಕತೆಯಿಂದ ನೋಡುತ್ತಿ ದ್ದರು. ಹೀಗೆ ಎಲ್ಲ ಕಡೆಯಲ್ಲಿ ಉತ್ಸುಕತೆಯು ನಡೆದಿರಲು, ಒಬ್ಬ ದೂತನು ಓಡುತ್ತೋಡುತ್ತ ಬಂದು ನೆರೆದ ಜನರೆದುರಿಗೆ ರಾಜನನ್ನು ಕುರಿತು—"ದೊರೆ ಯೇ, ಹೊರಗೆ ಯವನರು ತಂಡತಂಡವಾಗಿ ಬಂದು ಜನರನ್ನು ಕೊಲ್ಲುತ್ತ, ಸುಲಿಯುತ್ತ, ಮನೆಗಳಿಗೆ ಬೆಂಕಿಹಚ್ಚುತ್ತ ನಡೆದಿರುವರು. ಇಲ್ಲಿಗೆ ಬೇಗನೆ

ಬರುವಂತೆ ತೋರುತ್ತದೆ. ನಮ್ಮ ಸೈನಿಕರು ಶೂರತನದಿಂದ ಕಾದುತ್ತಿರುವರು. ಆದರೂ ಶೂರರಾದ ಅಫಗಾನರ ಮುಂದೆ ನಮ್ಮವರ ಆಟನಡೆಯುದಾಗಿದೆ.'' ಎಂದ ಹೇಳುತ್ತಿರಲು, ಪ್ರಜೆಗಳು ಗಾಬರಿಯಿಂದ ಹೌಹಾರಿ ಮಂಟಪವನ್ನು ನುಗ್ಗಿ—''ದೊರೆಯೇ, ನಮ್ಮನ್ನು ರಕ್ಷಿಸು ರಕ್ಷಿಸು!'' ಎಂದು ಕೂಗಾಟವನ್ನೆಬ್ಬಿಸಿದರು.

ಹೀಗೆ ಆನಂದಸಮಯದಲ್ಲಿ ಆದ ಆಕಸ್ಮಿಕ ಅಪಘಾತದಿಂದ ಎಲ್ಲರೂ ಹೆದರಿದರು! ರಾಜಪುತ್ರರು ತಮ್ಮ ಖಡ್ಗಗಳನ್ನು ಒರೆಯಿಂದ ಹಿರಿದು ಯುದ್ಧಕ್ಕೆ ಸಿದ್ಧರಾದರು. ಸೈನಿಕರೆಲ್ಲ ತಮ್ಮ ಶಸ್ತ್ರಗಳನ್ನು ಸಜ್ಜು ಮಾಡಿಕೊಂಡರು. ಅಷ್ಟರಲ್ಲಿ ಯವನಸೈನಿಕರು ಮಂಟಪವನ್ನು ಮುತ್ತಿ ಒಳನುಗ್ಗಿ ಕಂಡಕಂಡವರನ್ನು ಕೊಲ್ಲುತ್ತ 'ದೀನ ದೀನ' ಎಂದು ಕೋಲಾಹಲ ಮಾಡುತ್ತ ನಡೆದರು. ಇದೀಗ ಆನಂದೋತ್ಸವದಿಂದ ಕಾಣುವ ಮಂಟಪದಲ್ಲಿ ರಕ್ತದ ಕಾಲುವೆಯು ಹರಿಯಲಾರಂಭಿಸಿತು ವೀರರ ಖಡ್ಗಗಳ ಖಣಖಣಾಟವು ನಡೆದಿತ್ತು; ಕೆಲವರು ಭಾಲೆಯಿಂದ ಕೆಲವರು ಬಿಲ್ಲಿನಿಂದ ಯುದ್ಧ ಮಾಡಲಾರಂಭಿಸಿದರು ವೀರರ ರುಂಡಗಳು ಭೂಮಿಯ ಮೇಲೆ ಪಟಪಟನೆ ಬೀಳಹತ್ತಿದವು! ಇಕ್ಕಡೆಯ ಸೈನಿಕರು ಜೀವದ ಹಂಗುದೊರೆದು ಕಾದತೊಡಗಿದರು. ಎಲ್ಲಿ ನೋಡಿದರೂ ಅಂತಕನ ಕೋಲಾಹಲವೇ ಕಂಡುಬರತೊಡಗಿತು.

ಮುಸಲ್ಮಾನ ಸೈನ್ಯಕ್ಕೆ ಅಧಿಪತಿಯಾದ ರಹಿಮಾನನು, ಕೆಲವು ವಿಶ್ವಾಸಿಕ ಸೇವಕರೊಂದಿಗೆ ಮಂಟಪವನ್ನು ನುಗ್ಗಿದನು. ಅಲ್ಲಿ ರಾಜನಂದಿನಿಯು ಮೂರ್ಛಿತಳಾಗಿ ಬಿದ್ದಿದ್ದಳು. ರಹಿಮಾನನು ಆಕೆಯನ್ನು ಒಂದು ಡೋಲಿಯಲ್ಲಿ ಮಲಗಿಸಿ, ಯುಕ್ತಿಯಿಂದ ಪಾರಾಗಿ ನಡೆದನು.

ಆಗ ಮಂಟಪದಲ್ಲಿ ಭಯಂಕರ ಗೊಂದಲವೆದ್ದಿತು. ಎಲ್ಲ ಕಡೆಯಲ್ಲಿಯೂ ಘಾತವಾಯಿತು! ಘಾತವಾಯಿತು! ಎಂಬ ಆಕ್ರೋಶಧ್ವನಿಯು ಕೇಳಬರಹತ್ತಿತು. ರಾಜಾ ಸಿಂಹಕೇತುವು ಹೌಹಾರಿ ಕುಳಿತನು, ಮಗಳನ್ನು ಕಾಣದೆ ಹಂಬಲಿಸಿದನು. ಕೂಡಲೆ ತನ್ನ ಸೈನಿಕರಿಗೆ ಶತ್ರುಗಳನ್ನು ಬೆನ್ನಟ್ಟಲಿಕ್ಕೆ ಅಪ್ಪಣೆ ಮಾಡಿದನು. ಆಗ ಶೂರರಾದ ಅಫಗಾನರು ಅವರನ್ನು ತಡೆದು ನಿಲ್ಲಿಸಿ, ಒಳ್ಳೇ ಉತ್ಸಾಹದಿಂದ ಯುದ್ಧ ಮಾಡಹತ್ತಿದರು. 'ದೀನ ದೀನ' ಎಂದು ಕೋಲಾಹಲ ಮಾಡತೊಡಗಿದರು. ಹಿಂದುಗಳು ಎಷ್ಟು ಶೌರ್ಯ ತೋರಿಸಿದರೂ

ಯವನರ ಮುಂದೆ ಅವರ ಆಟವು ನಡೆಯುದಾಯಿತು. ರಹಿಮಾನನೂ, ಅಬ್ದುಲನೂ ಡೋಲಿಯನ್ನು ಸಾಗಿಸಿಗೊಂಡು ಬಹುದೂರ ಹೋದರು. ಒಳಿಕ ಮುಸಲ್ಮಾನ ಸೈನಿಕರು ಹಿಂದುಗಳನ್ನು ಹಣ್ಣುಮಾಡಿ ಮಿಥಿಲಾನಗರಿಯನ್ನು ಬಿಟ್ಟು ತಮ್ಮ ಪಾಳಯುದ ಕಡೆಗೆ ತಿರುಗಿದರು. ರಾಜನಂದಿನಿಯು ಅಪಹರಣದಿಂದಲೂ, ಅಸಂಖ್ಯಜನರು, ಮಡಿದದ್ದರಿಂದಲೂ ಮಿಥಿಲಾನಗರವು ಸೌಭಾಗ್ಯ ವಿಹೀನವಾಗಿ ತೋರತೊಡಗಿತು.

ರಾಜಾ ಸಿಂಹಕೇತುವು ಪರಾಕ್ರಮಶಾಲಿಯಾಗಿದ್ದರೂ ಕೆಲಸವು ಕೈಮೀರಿ ಹೋದ್ದರಿಂದ ನಿರುಪಾಯನಾಗಿ ಮುಸಲ್ಮಾನರ ಪಾರುಪತ್ಯಕ್ಕೆ ಸೈನಿಕರನ್ನು ಹುರಿದುಂಬಿಸಲಾರಂಭಿಸಿದನು. ಸ್ವಾಮಿನಿಷ್ಠರಾದ ಕೆಲಜನ ಸೈನಿಕರು ಮುಸಲ್ಮಾನರ ಪರಾಕ್ರಮವನ್ನು ಬಲ್ಲವರಾದರೂ ಜೀವದ ಹಂಗುದೊರೆದು ಶತ್ರುಗಳನ್ನು ಬೆನ್ನಟ್ಟಿ ನಡೆದರು. ರಾಜನು ಸಂತಾಪಾಗ್ನಿಯಿಂದ ದಗ್ಧನಾಗುತ್ತ ರಾಜನಂದಿನಿಯನ್ನು ಅಪಹರಿಸಿದ ಶತ್ರುಗಳ ಗಂಟಲವನ್ನು ಹ್ಯಾಗೆ ಹಿಳಲೆಂದು ಹಂಚಿಕೆ ಹಾಕಲಾರಂಭಿಸಿದನು.

---

## ೩ನೇ ಪ್ರಕರಣ—ಅರಣ್ಯರೋದನ!

ರಾಜಪುತ್ರನಾದ ರಹಿಮಾನನು ರಾಜನಂದಿನಿಯನ್ನು ಅಪಹರಿಸಿ, ತಾನೇ ಡೋಲಿಯವಾಹಕನಾಗಿ ಮಿಥಿಲಾನಗರಿಯಿಂದ ಪಾರಾದ ಬಳಿಕ ಅಫಗಾನಿಸ್ತಾನದ ಮಾರ್ಗವನ್ನು ಹಿಡಿಯದೆ ದಕ್ಷಿಣದ ಮಾರ್ಗವನ್ನು ಹಿಡಿದನು. ವಿಜಯದ ಉಬ್ಬಿನಲ್ಲಿ-ಸ್ತ್ರೀಲಾಭದ ಸಂತೋಷದಲ್ಲಿ ಅವನಿಗೆ ತಾನು ಎಲ್ಲಿಗೆ ಹೋಗುತ್ತೇನೆಂಬದರ ಅರಿವೇ ಉಳಿಯಲಿಲ್ಲ. ವಿಷಯಲಂಪಟರಿಗೆ ಇಚ್ಛಿತವಸ್ತು ಪ್ರಾಪ್ತಿಯಾದಾಗ ಹೀಗೆ ದೇಹಭಾನ ತಪ್ಪುವದು ಅಸ್ವಾಭಾವಿಕವಲ್ಲ. ಅವರು ಮೈಮರೆದು ಸುಖದ ಮಬ್ಬಿನಲ್ಲಿಯೇ ಪ್ರಾಪಂಚಿಕ ಆಪತ್ತನ್ನು ತಂದುಕೊಳ್ಳುತ್ತಾರೆ. ಅದರಂತೆ ಪ್ರಸ್ತುತದಲ್ಲಿ ರಹಿಮಾನನ ಸ್ಥಿತಿಯೂ ಆಯಿತು. ಆತನು ಸಂಗಡಿಗನಾದ ಅಬ್ದುಲನೊಡನೆ ಡೋಲಿಯನ್ನು ಹೊತ್ತುಕೊಂಡು ಸಂಜೆಯವರೆಗೆ ನಡೆದನು. ಹೊತ್ತು ಮುಳುಗಿ ಕತ್ತಲಾಗಲು, ಕಲ್ಲುಮುಳ್ಳುಗಳ ತುಳಿತದಿಂದ ಅವನಿಗೆ ಪ್ರಜ್ಞೆಯುಂಟಾಯಿತು. ಆಗ ಅವನು ಪಕ್ಕನೆ ಎಚ್ಚತ್ತು—“ಅಬ್ದುಲ, ಇದೇನು

ಅನರ್ಥವಾಯಿತಲ್ಲ? ನಾವು ದಾರಿ ತಪ್ಪಿ ಎಲ್ಲಿಗೆ ಬಂದೆವು? ಛೇ, ಕೆಲಸವು ಕೆಟ್ಟು ಹೋಯಿತು. ನಮ್ಮ ಸೈನಿಕರೆಲ್ಲೋ ನಾವೆಲ್ಲೋ ಆಗಿಬಿಟ್ಟೆವು. ಆಗಲಿ! ಇನ್ನು ಮುಂದೆ ನಾವು ಹೀಗೆ ವೈವುರೆತು ನಡೆವುದು ಕೆಲಸದ್ದಲ್ಲ. ನಾನು ಈ ಡೋಲಿಯನ್ನು ಕಾಯುತ್ತ ಇಲ್ಲಿಯೇ ಕುಳಿತುಕೊಳ್ಳುತ್ತೇನೆ. ನೀನು ನಮ್ಮ ಸೈನಿಕರನ್ನು ಗೊತ್ತುಹಚ್ಚಿಕೊಂಡು ಬಾ'' ಎಂದು ಅಪ್ಪಣೆ ಮಾಡಿದನು. ಒಡೆಯನ ಅಪ್ಪಣೆಯಂತೆ ಅಬ್ದುಲ್ಲನು ಡೋಲಿಯನ್ನಿಳಿಸಿ ಗಾಢಾಂಧಃಕಾರದಲ್ಲಿಯೇ ಖಡ್ಗಧಾರಿಯಾಗಿ ಸೈನಿಕರ ಶೋಧಕ್ಕೆ ನಡೆದನು. ಇತ್ತ ರಹಿಮಾನನು ಡೋಲಿಯಲ್ಲಿದ್ದ ತನ್ನ ಪ್ರಿಯವಸ್ತುವನ್ನು ಕಾಯುತ್ತ ಕುಳಿತುಕೊಂಡನು. ಹಾ! ವಿಷಯಸುಖ ಪಿಶಾಚಿಯೇ, ನಿನ್ನ ಗುಲಾಮರಾದವರನ್ನು ಹೀಗೆಯೇ ಕಷ್ಟಕ್ಕೆ ಗುರಿಮಾಡುವೆಯಲ್ಲವೆ?

ಇತ್ತ ಪಠಾಣ ಸೈನಿಕರು ಬೆನ್ನಟ್ಟಿ ಬಂದ ಶತ್ರುಗಳೊಡನೆ ಮತ್ತೆ ಹೋರಾಡಿ ಮೊದಲು ತಮ್ಮ ಛಾವಣಿಯಿದ್ದೆಡೆಗೆ ಬಂದರು. ಅಲ್ಲಿ ತಮ್ಮ ರಾಜಪುತ್ರನಾಗಲಿ, ಅಬ್ದುಲ್ಲನಾಗಲಿ ಯಾರೂ ಇರಲಿಲ್ಲ. ಅಪಹರಿಸಿ ತಂದ ಮಿಥಿಲಾನಗರಿಯ ರಾಜನಂದಿನಿಯೂ ಕಾಣಲಿಲ್ಲ. ಆಗ ಸೇನಾಪತಿಯಾದ ಉಸ್ಮಾನನು—ರಾಜನು ಅಫಗಾನಿಸ್ತಾನದ ದಾರಿಯನ್ನೇ ಹಿಡಿದಿರಬೇಕೆಂದು ತಿಳಿದು ಅಲ್ಲಿ ಒಂದು ಗಳಿಗೆ ಕೂಡಾ ನಿಲ್ಲದೆ ಅಫಗಾನಿಸ್ತಾನದ ದಾರಿಯನ್ನು ಹಿಡಿಯಬೇಕೆಂದು ಸೈನಿಕರಿಗೆ ಅಪ್ಪಣೆ ಮಾಡಿದನು ಅಫಗಾನಸೈನ್ಯವು 'ದೀನ ದೀನ' ಎಂದು ಗರ್ಜಿಸುತ್ತ ಅಫಗಾನಿಸ್ತಾನದ ಮಾರ್ಗವಾಗಿ ಉತ್ತರದಿಂದ ಸಾಗಿತು. ಪಾಪ! ಅದಕ್ಕೆ ತಮ್ಮ ಒಡೆಯನು ದಾರೀ ತಪ್ಪಿ ಪ್ರಿಯವಸ್ತುವಿನೊಡನೆ ಅಡವೀ ಪಾಲಾಗಿರುವನೆಂಬದು ಹ್ಯಾಗೆ ತಿಳಿಯಬೇಕು?

ಯಾವ ಪ್ರಾಣಿಗೂ ಭವಿತವ್ಯವು ತಿಳಿಯುವದಿಲ್ಲ. ತನ್ನ ಕಲ್ಪನೆಯಂತೆ ಸುಖ ಹೊಂದಲು ಮಾತ್ರ ಮನುಷ್ಯನು ಹಾತೊರೆಯುವನು. ಆದರೆ ಒಮ್ಮೊಮ್ಮೆ ಆತನ ಕಲ್ಪನೆಯೇ ಅವನಿಗೆ ವ್ಯತ್ಯಸ್ತರೂಪವಾಗುತ್ತದೆ. ಇದನ್ನು ತಿಳಿಯದೆ ಮೂಢರಾದ ನಾವು ಕಾಲ್ಪನಿಕ ಸುಖ ಅನುಭವಿಸುವದನ್ನು ನೋಡಿದರೆ ನಮ್ಮ ಸಮಾನ ಮರುಳರು ಜಗತ್ತಿನಲ್ಲಿ ಯಾರೂ ಇರಲಿಕ್ಕಿಲ್ಲೆಂದು ಅನ್ನಬೇಕಾಗುತ್ತದೆ. ಇರಲಿ.

ಇತ್ತ ರಹಿಮಾನನು ಕುಳಿತ ಅಡವಿಯು ಅತ್ಯಂತ ಭಯಾನಕವಾಗಿತ್ತು,

ಕ್ರೂರಪ್ರಾಣಿಗಳು ಗರ್ಜಿಸುತ್ತಿದ್ದವು. ಆತನು ವೀರಪುರುಷನಾದ್ದರಿಂದ ಕ್ರೂರ ಪ್ರಾಣಿಗಳಿಗೆ ಸೊಪ್ಪು ಹಾಕುವಷ್ಟು ಅಳ್ಳೆದೆಯವನಿದ್ದಿಲ್ಲ. ಆದರೆ ತಾನೊಬ್ಬನೇ ಅಡವಿಯಲ್ಲಿದ್ದದರಿಂದ ಮಿಥಿಲಾಧಿಪತಿಯ ಸೈನಿಕರು ತನ್ನನ್ನು ಮುತ್ತಿ ಎಲ್ಲಿ ಬೇಟೆಯನ್ನು ಕಸಿದುಕೊಂಡು ಹೋಗುವರೋ ಎಂದು ಮಾತ್ರ ತಲ್ಲಣಿಸುತ್ತಿದ್ದನು.

ಓರ್ವ ತರುಣಿಯ ಸೌಂದರ್ಯದ ಖ್ಯಾತಿಯನ್ನು ಕೇಳಿ, ಅವಳನ್ನು ಅಪಹರಿಸಬೇಕೆಂಬ ಪ್ರಾಯದ ಗರ್ವದಿಂದ ಬಂದ ಈ ತರುಣನಿಗೆ ಸಮಾಧಾನವು ಹ್ಯಾಗೆ ಆಗಬೇಕು? ಈ ವಿಚಾರದಿಂದ ಅವನು ಬಹಳ ನುಗ್ಗಾದನು ಇದರಲ್ಲಿ ದೈವಸಂಕಲ್ಪವು ಏನಿರುವದೋ ಎಂಬ ಭಯವು ಅವನಿಗೆ ಬರತೊಡಗಿತು. ಆಗ ಅವನಿಗೆ ಕೃತಕರ್ಮಕ್ಕೆ ಪಶ್ಚಾತ್ತಾಪವೂ ಆಯಿತು. ತಾನು ಇಂಥ ನೀಚ ಕಾರ್ಯವನ್ನು ಮಾಡದಿದ್ದರೆ, ಈಗಿನ ದುಃಸ್ಥಿತಿಯು ಪ್ರಾಪ್ತವಾಗುತ್ತಿದ್ದಿಲ್ಲವೆಂದು ಅಂದುಕೊಂಡನು. ಹರಿಣಿಯ ಹಂಬಲವನ್ನು ಬಿಟ್ಟನು, ತನ್ನ ಜೀವವು ಉಳಿದರೆ ಸಾಕೆಂದು ಅವನಿಗೆ ಅನಿಸಿತು. ಸೈನ್ಯವೂ ಹೋಯಿತು, ಮಿತ್ರರೂ ಹೋದರು; ಇನ್ನೇನು ಗತಿಯೆಂದು ಅವನು ಚಿಂತಿಸಿದನು. ಆ ಧೀರನ ಧೀರತೆಯು ಎತ್ತೋ ಓಡಿಹೋಯಿತು! ಅವನು ಪಶ್ಚಾತ್ತಾಪದಿಂದ ದಗ್ಧನಾಗಿ ಡೋಲಿಯಲ್ಲಿ ಹಣಿಕಿಹಾಕಿ ಕಮಲೆಯನ್ನು ಕುರಿತು—ರಾಜಪುತ್ರೀ, ನನ್ನ ನೀಚಕಾರ್ಯವು ನನಗೆ ಹೊಳೆದದೆ; ನನಗೆ ಬಹಳ ಪಶ್ಚಾತ್ತಾಪವಾಗಹತ್ತಿದೆ. ನಾನು ಬಹು ನೀಚನು. ಸುಮ್ಮನೆ ನಿನ್ನನ್ನು ನಿನ್ನ ತಂದೆಯಿಂದ ಅಗಲಿಸಿದೆನು. ನೀನು ಬಹುಕಷ್ಟಬಡಬೇಕಾಯಿತು! ಹಸಿವೆಯಿಂದ ಬಳಲಬೇಕಾಯಿತು! ಇದೆಲ್ಲ ದುರವಸ್ಥೆಯು ನನ್ನ ನೀಚತನದಿಂದಲೇ ನಿನಗೆ ಲಭಿಸಿತು. ಕಂದಹಾರದಲ್ಲಿರುವಾಗಲೇ ಇಷ್ಟೊಂದು ವಿವೇಕವು ನನಗೆ ಬಂದಿದ್ದರೆ ನಾನೊಬ್ಬ ಮನುಷ್ಯನಾಗುತ್ತಿದ್ದೆನು. ರಾಜಕುವರೀ, ನೀನು ಹೆದರಬೇಡ. ಬೆಳಗಾದ ಮೇಲೆ, ಕೂಡಲೆ ನಿನ್ನನ್ನು ನಿನ್ನ ತಂದೆಯ ಹತ್ತರ ಕಳಿಸುವೆನು. ಯಾವ ಯೋಚನೆಯನ್ನೂ ಮಾಡಬೇಡ. ಹಾಯ್ ಅಲ್ಲಾ! ನನಗೆ ಇಂಥ ದುರ್ಬುದ್ಧಿಯನ್ನು ಯಾಕೆ ಕೊಟ್ಟೆ? ಪರವಧುವನ್ನು ಅಪಹರಿಸಬೇಕೆಂಬ ನರರಿಗೆ ಧಿಕ್ಕಾರವಿರಲಿ!!

ನಡೆದ ಪರಿಸ್ಥಿತಿಯಿಂದ ರಾಜನಂದಿನಿಯು ಹೌಹಾರಿ ಹೋಗಿದ್ದಳು. ಅವಳಿಗೆ ಅದೇ ಸ್ಮೃತಿಯುಂಟಾಗಿತ್ತು. ತನ್ನನ್ನು ಯವನರು ಅಪಹರಿಸಿ ತಂದಿರುವರೆಂಬ ನಂಬಿಕೆ ಆಕೆಗೆ ಆಗಿತ್ತು. ಇನ್ನು ತನ್ನ ಪ್ರಾಣವನ್ನು ಹ್ಯಾಗೆ ತ್ಯಜಿಸ

ಬೇಕೆಂಬ ಯೋಚನೆಯನ್ನೇ ಅವಳು ನಡೆಸಿದ್ದಳು. ಅಷ್ಟರಲ್ಲಿ ರಹಿಮಾನನು ಹೀಗೆ ಮಾತನಾಡಲು ಅವಳಿಗೆ ಅನಿವಾರ ಸಿಟ್ಟು ಬಂದಿತು. ಅವಳು ಈ ನೀಚ ನೊಡನೆ ಏನೂ ಮಾತಾಡಬಾರದೆಂದು ನಿರ್ಧರಿಸಿದಳು. ರಾಜಪುತ್ರಿಯು ಸುಮ್ಮನಿದ್ದದ್ದನ್ನು ಕಂಡು ರಹಿಮಾನನು ಸುಮ್ಮನಾದನು. ಆಗ ಅವನಿಗೆ ಪಥ ಶ್ರಮದಿಂದ ಕೂತಲ್ಲಿಯೇ ನಿದ್ದೆ ಹತ್ತಲು ಅವನು ಹಾಗೇ ಒರಗಿಕೊಂಡನು. ಬೆಳಗು ಮುಂಜಾವಿನಲ್ಲಿ ಒಂದು ಭಯಂಕರವಾದ ದೃಶ್ಯವು ರಾಜಪುತ್ರಿಯ ದೃಷ್ಟಿಗೆ ಬಿದ್ದಿತು.

ಒಂದು ಅದ್ಭುತವಾದ ಸರ್ಪವು ಮನುಷ್ಯಾಕಾರನೆಯನ್ನು ಹಿಡಿದು, ಇವ ರಿದ್ದೆಡೆಗೆ ಒರಹತ್ತಿತು. ಅದು ಸರಾಸರಿ ೧೦-೧೨ ಮೊಳ ಉದ್ದವಿದ್ದು, ಆ ಮಾನದಿಂದ ಗಡುತರವೂ ಇದ್ದಿತು. ಅದು ಮೆಲ್ಲಗೆ ಇವರ ಸಮೀಪಕ್ಕೆ ಬಂದು ರಹಿಮಾನನನ್ನು ನುಂಗಲಾರಂಭಿಸಿತು. ಕಾಲಿನಿಂದ ಟೊಂಕದ ವರೆಗೆ ನುಂಗಿ ದರೂ ರಹಿಮಾನನಿಗೆ ಎಚ್ಚರವಿದ್ದಿಲ್ಲ.

ಇಂಥ ಭಯಂಕರ ದೃಶ್ಯವನ್ನು ನೋಡಿ, ಕೋಮಲಾಂಗಿಯಾದ ರಾಜ ನಂದಿನಿಯು ಚಿಟ್ಟನೆ ಚೀರಿ ಮೂರ್ಛೆಹೊಂದಿ ನೆಲಕ್ಕೆ ಬಿದ್ದಳು. ಇವಳ ಧ್ವನಿ ಕೇಳಿ ರಹಿಮಾನನು ಎಚ್ಚತ್ತನು. ಅವನ ಕಾಲಿಗೆ ಏನೋ ತಣ್ಣಗೆ ಹತ್ತಿದ ಹಾಗೆ ತೋರಿತು. ಆಗ ಅವನು ನೋಡಲು ಒಂದು ಭಯಂಕರವಾದ ಸರ್ಪವು ತನ್ನನ್ನು ನುಂಗುತ್ತಿರುವದೆಂಬದು ತಿಳಿಯಿತು. ಆಗ ಅವನು ಅಂಜಿ ದರೂ, ಮತ್ತೆ ಅವನು ಧೈರ್ಯವ ತಂದುಕೊಂಡು, ಹತ್ತರದಲ್ಲಿದ್ದ ಖಡ್ಗವನ್ನು ತೆಗೆದುಕೊಂಡು ಅದನ್ನು ಸರ್ಪದ ಬಾಯಿಗೆ ಅಡ್ಡವಾಗಿ ಹಿಡಿದನು. ಅವನ ಈ ಹಂಚಿಕೆಯಿಂದ ಸರ್ಪದ ಕಟವಾಯಿಯು ಹರಿಯಹತ್ತಿತು. ಕೂಡಲೆ ಆ ಕ್ರೂರ ಪ್ರಾಣಿಯು ಅವನನ್ನು ಬಿಟ್ಟು ಹಿಂದಕ್ಕೆ ಸರಿಯಿತು. ರಹಿಮಾನನು ಚಟ್ಟನೆ ಎದ್ದು, ಖಡ್ಗದಿಂದ ಆ ಸರ್ಪವನ್ನು ತುಂಡರಿಸಿ ಹಾಕಿದನು. ಆಗ ಅವನ ಅರಿವೆ-ಅಂಚಿಡಿಗಳೂ, ಖಡ್ಗವೂ ರಕ್ತಮಯವಾದವು.

ಇಷ್ಟೆಲ್ಲ ಆಗುವದರೊಳಗೆ ರಾಜಪುತ್ರಿಯು ಮೂರ್ಛೆಯಿಂದೆಚ್ಚತ್ತು ಸರ್ಪ ವು ತುಂಡು ತುಂಡಾಗಿ ಬಿದ್ದದ್ದನ್ನು ನೋಡಿದಳು. ಇದಲ್ಲದೆ ತನ್ನ ವೈರಿಯ ರಕ್ತಮಯ ಶರೀರವನ್ನೂ ನೋಡಿದಳು. ತನ್ನ ಪಾತಿವ್ರತ್ಯವನ್ನು ಹರಣಮಾಡ ಬೇಕೆಂದು ಮಾಡಿದ ನೀಚನ ಪ್ರಾಣಹರಣವಾಗಿದ್ದರೆ ಅವಳಿಗೆ ಸಂತೋಷವಾಗು

ತ್ತಿತ್ತು.; ಆದರೆ ಅವನ ಪ್ರಾಣ ತೆಗೆದುಕೊಳ್ಳಬಂದ ಸರ್ಪವೇ ಪ್ರಾಣಕೊಟ್ಟಿತು. ದೇವರ ಮನಸ್ಸಿನಲ್ಲಿ ಈ ಪಾಪಿಯನ್ನು ಜೀವದಿಂದಿಡಬೇಕೆಂದಿರಬಹುದೆಂದು ತಿಳಿದಳು. 'ತಾನು ಜೀಂದ್ದರಿಂದಲೇ ಮಲಗಿದ ಇವನು ಎಚ್ಚರಾಗಿ ಆ ಸರ್ಪ ವನ್ನು ತುಂಡರಿಸಿದನು. ಇಲ್ಲದಿದ್ದರೆ ಇಷ್ಟರಲ್ಲಿಯೇ ಇವನು ಯಮಲೋಕಕ್ಕೆ ತೆರಳುತ್ತಿದ್ದನು!' ಎಂದು ಮನದಲ್ಲಿ ಅನ್ನಹತ್ತಿದಳು.

ರಹಿಮಾನನು ರಕ್ತದಿಂದ ತೊಯ್ದ ತನ್ನ ಖಡ್ಗವನ್ನು ಗಿಡದ ಎಲೆಗಳಿಂದ ಒರಿಸಿದನು. ಆಮೇಲೆ ಅದನ್ನು ಒರೆಗಾಣಿಸಿ ಕುಳಿತುಕೊಂಡನು. ತುಸಹೊತ್ತಿನ ಮೇಲೆ ರಹಿಮಾನನು ರಾತ್ರಿಯಲ್ಲಿ ತನಗಾದ ಪಶ್ಚಾತ್ತಾಪವನ್ನು ಮರೆತು— ಕೋಮಲಾಂಗೀ, ಎಷ್ಟು ಕಷ್ಟಬಟ್ಟೆಯಲ್ಲ! ನಿನ್ನೆ ರಾತ್ರಿಯಿಂದ ನಿನಗೆ ಆಹಾರ ನಿದ್ರೆಗಳಿಲ್ಲ. ಯಾಕೆ ಇಷ್ಟು ಯೋಚಿಸುವಿ? ಚಿಂತೆಯನ್ನು ಬಿಡು. ನನ್ನ ಸೈನಿಕರು ಸಮೀಪದಲ್ಲಿಯೇ ಇರಬಹುದು. ನೀನು ಗಾಬರಿಯಾಗಬೇಡ. ನಾನು ನಿನ್ನನ್ನು ಪ್ರೀತಿಸಿ ಕರಕೊಂಡು ಬಂದಿರುವೆನು. ನಿನಗೆ ತೊಂದರೆ ಕೊಡಲಾರೆನು. ನಾನು ಅಫಗಾನ ರಾಜಪುತ್ರನಿದ್ದೇನೆ. ನನ್ನನ್ನು ನೀನು ಪ್ರೀತಿಸಿದರೆ ನಿನ್ನ ವೈಭವಕ್ಕೆ ಎಣೆಯಿಲ್ಲ. ಸುಂದರವಾದ ಅಂತಃಪುರವು ನಿನ್ನ ನಿವಾಸಸ್ಥಾನವಾಗುವದು. ಅಸಂಖ್ಯ ದಾಸ-ದಾಸಿಯರು ನಿನ್ನೆದುರಿಗೆ ಕೈಕಟ್ಟಿಕೊಂಡು ನಿಲ್ಲುವರು. ಅಪಾರವಾದ ಐಶ್ವರ್ಯವು ನಿನಗೆ ಲಭಿಸುವದು. ನನ್ನ ರಾಜ್ಯವು ನಿನ್ನ ತಂದೆಯ ರಾಜ್ಯಕ್ಕಿಂತ ಅಧಿಕವಾಗಿರುವದು. ಇನ್ನೇನು ಹೇಳಲಿ? ನೀನು ನನ್ನ ಪಟ್ಟದ ರಾಣಿಯಾಗುವಿ!'' ಎಂದು ನುಡಿದನು.

ರಾಜಪುತ್ರಿಯು ಅವನ ಮಾತು ಮುಗಿಯುವ ವರೆಗೆ ಒಂದು ತುಟಿಯನ್ನು ಎರಡು ಮಾಡಲಿಲ್ಲ. ಅವಳಿಗೆ ಭಯಂಕರವಾದ ಕೋಪವು ಬಂದಿತು. ತುಟಿಗಳು ನಡುಗಹತ್ತಿದವು; ಮೋರೆಯು ಕೆಂಪಾಯಿತು; ಹೃದಯವು ಕಂಪಿಸಿತು; ಮಾತಾಡಹೋದಳು, ಆದರೆ ಕೋಪದ ಭರದಿಂದ ಅವಳಿಂದ ಮಾತುಗಳೇ ಹೊರಡಲಿಲ್ಲ. ಬಳಿಕ ಕೆಲಹೊತ್ತಿನ ಮೇಲೆ ಅವಳು ಸಂತಾಪಾತಿರೇಕದಿಂದ:—''ಎಲೈ ಅಧಮಾ, ಎಂಥ ಅಭದ್ರಮಾತುಗಳನ್ನಾಡುವೆ! ನಿನ್ನೆ ಆಡಿದ ಮಾತುಗಳು ಎತ್ತ ಹೋದವು? ನಿನ್ನ ವಿವೇಕವು ಎತ್ತ ಅಡಗಿತು? ವಿಷಯಲಂಪಟರ ವಿವೇಕವು ಕ್ಷಣಿಕವಾದದ್ದು! ನಿನ್ನ ರೀತಿಯನ್ನು ನಾನು ಮೊದಲೇ ಕಂಡು ಹಿಡಿದಿರುವೆನು. ನೀನು ಮಹಾ ಮೂರ್ಖನಿರುತ್ತೀ! ಪರಸ್ತ್ರೀಲಂಪಟನಿರುತ್ತೀ! ನಿನ್ನ ಪಾಪದ

ಫಲವನ್ನು ನಿನಗೆ ದೇವರು ನಿಶ್ಚಯವಾಗಿ ಸಿದ್ಧಮಾಡಿಟ್ಟಿರುವನು. ಪತಿವ್ರತೆ ಯರ ಶಾಪವು ಪ್ರಜ್ವಲಿತವಾದ ಅಗ್ನಿಗೆ ಸಮಾನವು. ವಿಚಾರಮಾಡಿ ನೋಡು. ನನ್ನನ್ನು ನನ್ನ ತಂದೆಯ ಬಳಿಗೆ ಕಳಿಸು ನನಗೆ ನಿನ್ನ ಐಶ್ವರ್ಯದ ಆಶೆಯಿಲ್ಲ. ರಾಜ್ಯಾಪೇಕ್ಷೆಯಿಲ್ಲ; ದಾಸ-ದಾಸಿಯರು ಬೇಕಿಲ್ಲ; ನಿನ್ನ ಮೋಹದ ಮಾತುಗಳಿಗೆ ನಾನು ಮರುಳಾಗಲಾರೆನು. ನಿನ್ನ ಈ ಅಧರ್ಮದ ಕಾರ್ಯಕ್ಕೆ ದೇವರು ಯಶಸ್ಸನ್ನು ದಯಪಾಲಿಸಲಾರನು. ಎಲೈ ಜೋರನೇ, ಪತಿವ್ರತಾ ಶಿರೋಮಣಿಗಳಾದ ಭಾರತ ಪುತ್ರಿಯರ ಚರಿತ್ರೆಯನ್ನು ನೀನೇನುಬಲ್ಲೆ? ಪಾತಿವ್ರತ್ಯವೇ ಹಿಂದೂ ಮಹಿಳೆಯರ ಶೀಲವು! ಅದಕ್ಕಾಗಿ ಅವರು ಪ್ರಾಣವನ್ನು ಕೂಡ ತೃಣೀಕರಿಸುವರು. ನೀನು ಅಡ್ಡದಾರಿಯನ್ನು ಹಿಡಿದರೆ, ನನ್ನ ಜೀವವು ನನ್ನ ಕೈಯಲ್ಲಿ ಇರುತ್ತದೆ. ವಿವೇಕಭ್ರಷ್ಟನೂ, ಕಡುಮೂರ್ಖನೂ ಆದ ನಿನ್ನನ್ನು ನೋಡಲಾರೆನು. ಇದು ನಿಶ್ಚಯವು. ನೀನು ನನ್ನನ್ನು ನನ್ನ ತಂದೆಯ ಬಳಿಗೆ ಕಳಿಸದಿದ್ದರೆ ಇಲ್ಲಿಯೇ ಪ್ರಾಣಬಿಡುವೆನು. ನಿನ್ನ ಸಂಗಡ ಬರಲಿಕ್ಕಿಲ್ಲ; ದುಷ್ಟಾ, ಆರ್ಯಪುತ್ರಿಯರ ಶೀಲವನ್ನಪಹರಿಸಬೇಕೆಂಬ ದುರ್ವಿಚಾರಕ್ಕೆ ಒಳಗಾಗಬೇಡ!!

ಈ ಮೇರೆಗೆ ರಾಜನಂದಿನಿಯು ತಿರಸ್ಕಾರ ಪೂರ್ವಕವಾಗಿ ಮಾತನಾಡಲು ರಹಿಮಾನನು ಸುಮ್ಮನೆ ಕೇಳಿಕೊಂಡನು. ಅವನಿಗೆ ಆಕೆಯ ಮಾತಿನಿಂದ ಸಿಟ್ಟು ಬರಲಿಲ್ಲ. ಅವನು ಮುಗುಳುನಗೆ ನಕ್ಕು—ಸುಂದರೀ, ಹೀಗೆ ಕೋಪಿಸಬೇಡ, ಎಂದು ಅವಳ ಕೈಹಿಡಿಯ ಹೋದನು. ಆಗ ಅವಳು ದೂರ ಸರಿದು—ಎಲೈ ಮೂರ್ಖಾ, ನನ್ನನ್ನು ಮುಟ್ಟಬೇಡ ನಿನ್ನ ಪಾಪೀ ಹಸ್ತಗಳು ನನ್ನ ದೇಹದಲ್ಲಿ ಪ್ರಾಣವಿರುವವರೆಗೆ ನನ್ನನ್ನು ಸ್ಪರ್ಶ ಮಾಡಲಾರವು. ಯಾಕೆ? ನಾನಿಷ್ಟು ತಿರಸ್ಕರಿಸಿದರೂ ನಿನಗೆ ನಾಚಿಕೆಯುಂಟಾಗಲಿಲ್ಲವೆ? 'ಲಜ್ಜಾ' ಎಂಬವೆರಡು ಅಕ್ಷರಗಳನ್ನು ಬಿಟ್ಟರೆ ಸುಖಿಯಾಗುವೆನೆಂದು ತಿಳಿದಿರುವೆಯಾ? ನಾನು ಅಬಲೆಯಾದರೂ—ನಿರಾಶ್ರಿತಳಾದರೂ ನಿನ್ನಂಥ ನರಾಧಮನ ಆಟವನ್ನು ನಡೆಯಗೊಡಲಾರೆನು. ಎಚ್ಚರಿಕೆ!! ಎಂದು ಗದ್ದರಿಸಿದಳು.

ರಹಿಮಾನನು ಇದನ್ನೆಲ್ಲ ಕೇಳಿದನು. ಆದರೂ ಅವನು ಸುಮ್ಮನೇ ಇದ್ದನು. ಬಲೆಯಲ್ಲಿ ಬಿದ್ದ ಬೇಟೆಯು ತಪ್ಪಿಸಿಕೊಂಡು ಹೋಗುವದೆಲ್ಲಿಗೆ? ಎಂದು ನಂಬಿದನು. ಬಳಿಕ ಅವನು ಶಾಂತಮನಸ್ಸಿನಿಂದ ರಾಜಪುತ್ರಿಯನ್ನು ಕುರಿತು—ತರುಣೀ, ಯಾಕೆ ಇಷ್ಟು ಚಡಪಡಿಸುವಿ? ನೀನು ಮಾಡುವ

ದಾದರೂ ಏನು? ಇಲ್ಲಿ ನನ್ನ ಹೊರತು ನಿನಗಾರು ಆಪ್ತರಿರುವರು? ನಿನ್ನ ತಂದೆಯ ಆಶೆಯನ್ನು ಬಿಡು. ಪ್ರೀತಿಯಿಂದ ನನ್ನನ್ನು ಕೂಡು. ಸುಮ್ಮನೆ ಬಾಯಿಗೆ ಬಂದಹಾಗೆ ಬಡಬಡಿಸಬೇಡ. ಅದರಿಂದ ನಿನಗೆ ಹಿತವಾಗಲಾರದು. ನೀನು ಬೇಕಾದಷ್ಟು ಬುದ್ಧಿಯನ್ನು ಹೇಳಿದರೂ ನಾನು ಕೇಳಲಾರೆನು. ನೀನು ಇಲ್ಲಿಂದ ತಪ್ಪಿಸಿಕೊಂಡು ಹೋಗಲಾರೆ. ಅದಾವನು ನಿನ್ನನ್ನು ಬಿಡಿಸುವನು? ನಿನ್ನ ಹಿತಚಿಂತಕರು ಅದಾರು ಇರುವರು? ಕರೆ ನೋಡೋಣ? ನಿಮ್ಮ ತಂದೆಯು ಬಂದರೂ ಅಷ್ಟೇಕೆ ಪ್ರತ್ಯಕ್ಷ ಯಮನು ಬಂದರೂ ಅವನ ಕೈಯಿಂದ ನಿನ್ನನ್ನು ಅಪಹರಿಸುವೆನು. ವ್ಯರ್ಥವಾಗಿ ಚಿಂತಿಸಬೇಡ. ಅದರಿಂದ ಸ್ವಲ್ಪವೂ ಉಪಯೋಗವಾಗದು. ನಾನು ನಿನ್ನ ತಿಳುವಳಿಕೆಯಂತೆ ಅಡ್ಡದಾರಿಯನ್ನು ಹಿಡಿದಿರುವದು ನಿಜವು. ಆದರೆ ನಾನು ಹಿಡಿದದ್ದು ಅಡ್ಡದಾರಿಯಲ್ಲ. ನೀನಿನ್ನೂ ಲಗ್ನವಾಗದ ಸ್ತ್ರೀಯಿರುತ್ತೀ. ನೀನಿನ್ನೂ ಪರಸ್ತ್ರೀಯಾಗಿಲ್ಲ. ನನಗೆ ನೀನು ಧರ್ಮೋಪದೇಶ ಮಾಡುವ ಕಾರಣವಿಲ್ಲ. ಎಂದು ನುಡಿದನು.

ಮುಂದೆ ಕೆಲಹೊತ್ತಿನ ವರೆಗೆ ಇಬ್ಬರೂ ಸುಮ್ಮನೆ ಕುಳಿತರು. ಅಷ್ಟೊತ್ತಿಗೆ ಸೂರ್ಯೋದಯುವಾಯಿತು. ಆಗ ರಹಿಮಾನನು ಖಡ್ಗವನ್ನು ತೆಗೆದುಕೊಂಡು, ಎದ್ದುನಿಂತು—ರಾಜಕುವರೀ, ನಾನು ನಿನ್ನ ಆಹಾರಾರ್ಥವಾಗಿ ಹಣ್ಣು-ಹಂಪಲಗಳನ್ನು ತರುವೆನು. ನೀನಿಲ್ಲೇ ಇರು. ಆದರೆ ನೀನು ಹೋಗುವದೆಲ್ಲಿಗೆ? ಬೇಕಾದಲ್ಲಿ ಹೋಗು!

ನಾನು ಆಕಾಶ-ಪಾತಾಳಗಳನ್ನು ಒಂದು ಮಾಡಿ ನಿನ್ನನ್ನು ಹುಡುಕದೆ ಬಿಡೆನು. ಎಂದಂದು ಹೊರಟು ಹೋದನು.

ಯವನ ರಾಜಪುತ್ರನು ಹೊರಟು ಹೋಗಲು ಇತ್ತ ರಾಜನಂದಿನಿಯು ತನ್ನ ಪ್ರಾರಬ್ಧಭೋಗವನ್ನು ನೆನೆದು ಘನಘೋರವಾಗಿ ಅತ್ತಳು; ಹಲವು ಬಗೆಯಿಂದ ದೇವರಿಗೆ ಮೊರೆಯಿಟ್ಟಳು. ತನ್ನನ್ನು ಈ ಸಂಕಟದಿಂದ ಯಾರು ಪಾರು ಮಾಡಿಯಾರೆಂದು ಹಂಬಲಿಸಿ ಹಲುಬಿದಳು. ಆಕೆಯು ಈ ಅರಣ್ಯರೋದನೆಯನ್ನು ಯಾರು ಕೇಳಬೇಕು? ಆಕೆಯಲ್ಲಿ ಧರ್ಮವಿದ್ದದರಿಂದ ಸರ್ವಜ್ಞನಾದ ದೇವರಿಗೆ ದಯಬಂದಿದ್ದರೆ ಬರಬೇಕು. ದೈವೀಭಾವನೆಯನ್ನು ಬಿಟ್ಟು ವಿಚಾರಿಸಿದರೆ ಆಕೆಯ ರೋದನವು ಮಾನವೀ ದೃಷ್ಟಿಯಿಂದ ಅರಣ್ಯರೋದನವೇ ಸರಿ!!

---

## ೪ನೇ ಪ್ರಕರಣ--ಈ ವೀರನು ಯಾರಿರಬಹುದು?

ಈ ಮೇರೆಗೆ ರಾಜಪುತ್ರಿಯು ಹಂಬಲಿಸಿ ಹಲುಬಿದ ಬಳಿಕ ಆ ಯುವನ ರಾಜಪುತ್ರನು ತಿರುಗಿ ಬರುವಷ್ಟರಲ್ಲಿ ಈ ಸ್ಥಳದಿಂದ ಪಾರಾಗಿ ಹೋಗಬೇಕೆಂಬ ಬುದ್ಧಿಯು ಆಕೆಗೆ ಉತ್ಪನ್ನವಾಯಿತು. ಅವಳು ಪಾರಾಗುವ ಹಂಚಿಕೆಯನ್ನು ಹುಡುಕ ಹತ್ತಿದಳು ಅವಳ ಹೊಟ್ಟೆಯಲ್ಲಿ ಆಹಾರವಿಲ್ಲದ್ದೇನೋ ನಿಜ; ಅದ ರಿಂದ ಅವಳಲ್ಲಿ ಶಕ್ತಿಯೂ ಇದ್ದಿಲ್ಲ. ಆದರೆ ಪ್ರಸಂಗವು ಭಯಂಕರವಿದ್ದದರಿಂದ ಮನಸ್ಸಿನಲ್ಲಿ ಧೈರ್ಯತಂದುಕೊಂಡು ಅಡವಿಯಲ್ಲಿ ಎಲ್ಲಾದರೂ ಅಡಗಿಕೊಳ್ಳ ಬೇಕೆಂದು ಒತ್ತರದಿಂದ ಓಡಹತ್ತಿದಳು. ಅಡವಿಯಲ್ಲಿ ಕಲ್ಲು-ಮುಳ್ಳುಗಳಿಗೇನು ಕಡಿಮೆ? ಕಾಲಿಟ್ಟಲ್ಲಿ ಕಲ್ಲು-ಮುಳ್ಳುಗಳು!! ಅವಳ ಕಾಲುಗಳಲ್ಲಿ ಮುಳ್ಳುಗಳು ನಟ್ಟು ಬಾಧೆಗೊಳಿಸಿದವು. ಕಲ್ಲುಗಳನ್ನು ಎಡವಿ ಅವಳ ಬೆರಳುಗಳಿಂದ ರಕ್ತವು ಹೊರಚಿಮ್ಮಲಾರಂಭಿಸಿತು. ನಟ್ಟಮುಳ್ಳುಗಳನ್ನು ತೆಗೆದುಕೊಳ್ಳಲು ಸಹ ಅವ ಳಿಗೆ ಅವಕಾಶವಿರಲಿಲ್ಲ ಯಾವಳು ಸೂರ್ಯಪ್ರಕಾಶವನ್ನು ಸಹ ನೋಡಿದ್ದಿಲ್ಲ ವೋ, ಯಾವಳ ಕಾಲನ್ನು ಸೂಕ್ಷ್ಮವಾದ ವಸ್ತ್ರಗಳಿಂದ ಒರಿಸಲು ಸಹ ದಾಸಿಯರು ಅಂಜುತ್ತಿದ್ದರೋ, ಯಾವಳು ವಾಹನಗಳಿಲ್ಲದೆ ಹೊರಗೆ ಹೊರಡುತ್ತಿದ್ದಿಲ್ಲವೋ ಅವಳು ಇಂದು ಇಂಥ ದುಃಸ್ಥಿತಿಯನ್ನು ಹೊಂದಬೇಕಾದದ್ದಕ್ಕೆ ಏನನ್ನಬೇಕು? ದೈವಲೀಲೆಯು ವಿಚಿತ್ರವಾದದ್ದೇ ಸರಿ! ಅಂತಃಪುರದಲ್ಲಿದ್ದ ರಾಜಪುತ್ರಿಯು ಈಗ ವನವಾಸಿಯಾದಳು! ಸಾವಿರಾರುಜನ ದಾಸಿಯರಿಂದ ಪರಿವೃತಳಾದ ರಾಜಪು ತ್ರಿಯು, ಈಗ ಸಂಗಡಿಗರಿಲ್ಲದೆ ಬಾಯಾರಿ ಬಳಲುತ್ತಿರುವಳು! ಎಲ್ಲಿಯ ರಾಜ ಭುವನ? ಎಲ್ಲಿಯ ರಾಜ್ಯೈಶ್ವರ್ಯ? ಎಲ್ಲಿಯ ದಾಸ-ದಾಸಿಯರು? ಸುದೈವವಿರುವ ವರೆಗೆ ಎಲ್ಲವೂ ನೆಟ್ಟಗೆ. ದೈವವು ವಿಮುಖವಾಯಿತೆಂದರೆ ಎಲ್ಲವೂ ತಿರುವು ಮುರುವಾಗುವದು. ಆದ್ದರಿಂದಲೇ ಜ್ಞಾನಿಗಳು ವೈಭವವು ಶಾಶ್ವತವಲ್ಲವೆಂದು ಹೇಳುವರು.

ರಾಜಪುತ್ರಿಯು ಒಂದೇಸವನೆ ಓಡುತ್ತಿದ್ದಳು. ಅವಳ ಕಾಲುಗಳಿಂದ ರಕ್ತವು ಬಹಳ ಹೋಗಹತ್ತಿದ್ದರಿಂದ ಅವಳು ತನ್ನ ಸೀರೆಯ ಸೆರಗನ್ನು ಹರಿದು ಕಾಲಿಗೆ ಕಟ್ಟಿದಳು. ಆಗ ಅವಳ ಕಣ್ಣೊಳಗಿಂದ ಅಶ್ರುಗಳು ಧಾರೆಗಟ್ಟಿ ಸುರಿ ಯುತ್ತಿದ್ದವು; ತಲೆಗೂದಲುಗಳು ಅಸ್ತವ್ಯಸ್ತವಾಗಿದ್ದವು; ಅವಳ ಮುಖವು

ನಿಸ್ತೇಜವಾಯಿತು. ಆಕೆಯು ಹೀಗೆ ತುಸಹೊತ್ತು ಕ್ರಮಿಸಿದ ಮೇಲೆ ದೂರ
ದಲ್ಲಿ ಒಂದು ದೇವಾಲಯವು ಕಾಣಹತ್ತಿತು. ಆಗ ಅವಳು ಸಮಾಧಾನವನ್ನು
ಹೊಂದಿದಳು. ಕೆಲಹೊತ್ತಿನಲ್ಲಿ ದೇವಾಲಯವು ಬಂದಿತು. ಒಳಗೆ ನೋಡಿದಳು.
ಶಿವಲಿಂಗದ ಹೊರತು ಅವಳ ಕಣ್ಣಿಗೆ ಏನೂ ಬೀಳಲಿಲ್ಲ. ಮನುಷ್ಯರ
ಸುಳಿವಂತೂ ಇದ್ದಿಲ್ಲ.

ರಾಜಪುತ್ರಿಯು ಗುಡಿಯನ್ನು ಪ್ರವೇಶಿಸಿ, ಈಶ್ವರನನ್ನು ಭಕ್ತಿಯಿಂದ
ನಮಿಸಿದಳು. ಆಗ ಅವಳಿಗೆ ಹಿಂದಿನ ಸಂಗತಿಯೆಲ್ಲ ನೆನಪಾಗಿ ಅನಿವಾರವಾದ
ದುಃಖವಾಯಿತು. ಅಶ್ರುಗಳು ಧಾರೆಗಟ್ಟಿ ಸುರಿಯಹತ್ತಿದವು. ಆಗ ಅವಳು
ದೇವರಮುಂದೆ ಕುಳಿತು ಮುಕ್ತಕಂಠದಿಂದ ಸಣ್ಣ ಹುಡುಗರಂತೆ ಗಟ್ಟಿಯಾಗಿ
ಅಳಹತ್ತಿದಳು.

ಪ್ರಿಯ ವಾಚಕರೇ, ಗಹನವಾದ ಅರಣ್ಯವು; ಅದರಲ್ಲಿ ಇದೊಂದೇ ಸಣ್ಣ
ಗುಡಿಯು. ಕಣ್ಣುಕಪ್ಪಡಿಗಳ ಹೊರತು ಆ ಗುಡಿಯಲ್ಲಿ ಬೇರೆ ಜೀವಿಗಳಿರಲಿಲ್ಲ.
ಶಿವಲಿಂಗದ ಮೇಲೆ ಒಂದಾದರೂ ಬಿಲ್ವಾಕ್ಷತೆಗಳಿದ್ದಿಲ್ಲ. ಇಂಥ ನಿರ್ಮಾನುಷ
ವಾದ ಅರಣ್ಯದಲ್ಲಿ ದೊಡ್ಡ ದೊಡ್ಡ ವೀರರು ಅಂಜುತ್ತಿರಲು, ಸಂಕಟಗ್ರಸ್ತಳಾದ
ರಾಜನಂದಿನಿಯು ಅವಸ್ಥೆಯು ಹ್ಯಾಗಾಗಿರಬಹುದೆಂಬದನ್ನು ಹೇಳುವದಕ್ಕಿಂತ
ತರ್ಕದಿಂದ ತಿಳಿಯುವದೇ ಉಚಿತವು.

ರಾಜಕುಮಾರಿಯ ರೋದನವು ಅಳತೆಗೆಟ್ಟಿತು. ಅವಳು ಮೋರೆಯ
ಮೇಲೆ ಸೆರಗು ಹಾಕಿಕೊಂಡು:—"ಹಾ! ದೈವವೇ, ನನ್ನನ್ನು ಯಾವಸ್ಥಿತಿಗೆ
ಮುಟ್ಟಿಸಿದೆಯಲ್ಲ! ಅರಮನೆಯಲ್ಲಿದ್ದ ನಾನು ವನವಾಸಿಯಾಗಬೇಕಾಯಿತಲ್ಲ!
ಅರಮನೆಯಲ್ಲಿ ಅಕ್ಕರತೆಯಿಂದ ಬೆಳೆದು, ಸುಖದಿಂದಿದ್ದ ನನಗೆ ಎಂಥ ಕಷ್ಟ ಬದ
ಗಿತಲ್ಲ! ಹಾಯ್! ನನ್ನ ಪ್ರೀತಿಯ ತಂದೆಯೇ ಎತ್ತಹೋದೆ? ಕ್ಷಣವಾದರೂ
ನನ್ನನ್ನು ಬಿಟ್ಟಿರದ ನೀನು, ಈಗ ಕಣ್ಣು ಮುಚ್ಚಿಕೊಂಡು ಕುಳ್ಳಿರಬಹುದೇ?
ಅವ್ವಾ, ನನ್ನ ಹಡೆದ ತಾಯಿಯೊ, ನನ್ನನ್ನಗಲಿ ನೀನು ಎಷ್ಟು ಕಷ್ಟ ಬಡುತ್ತಿರ
ಬಹುದು? ಪ್ರಿಯಸಖೀ, ಕಮಲಾಕ್ಷಿ, ನನ್ನನ್ನಗಲಿದೆಯಾ? ಎಲೈ ನನ್ನ ಪ್ರೇಮದ
ದಾಸಿಯರೇ, ಎತ್ತ ಅಡಗಿದಿರಿ? ಎಲ್ಲಿಯದೆ ನನ್ನ ಐಶ್ವರ್ಯ! ಎಲ್ಲಿಯದೆ ನನ್ನ ಅಧಿ
ಕಾರ! ಹಾಯ್! ಹಾಯ್! ಇದಕ್ಕೇ ದೈವದುರ್ವಿಲಾಸವೆನ್ನಬೇಕು. ಎಲೈ
ದಯಾಘನನಾದ ಪರಮಾತ್ಮಾ, ಕಣ್ಣು ಮುಚ್ಚಿಕೊಂಡು ಕುಳಿತಿರುವೆಯಾ?

ಪತಿತಪಾವನನೇ, ನಿನ್ನ ಭಕ್ತವಾತ್ಸಲ್ಯವು ಎಲ್ಲಿ ಹೋಯಿತು? ಹರಹರ! ಬೇಡ, ಈ ಸ್ಥಿತಿಯು ನನ್ನ ವೈರಿಗೆ ಕೂಡಾ ಬೇಡ!! ಅಯ್ಯೋ, ನಾನೆಂಥ ಹುಚ್ಚಿಯು? ಪಾಲಿಗೆ ಬಂದದ್ದನ್ನು ಅನುಭವಿಸಬೇಕಲ್ಲವೆ? ಇದು ಪೂರ್ವಾರ್ಜಿತ ಕರ್ಮಫಲವು. ಇದು ಏನು ಮಾಡಿದರೆ ಬಿಟ್ಟೀತು? ಸುಮ್ಮನೆ ದೈವವನ್ನು ಹಳಿದರೆ ಉಪಯೋಗ ವೇನು? ತಂದೆ ತಾಯಿಗಳನ್ನು ನೆನೆದರೆ ಫಲವೇನು? ಗಿರಿಜಾಪತೇ, ಈ ಮನೋ ವ್ಯಥೆಯನ್ನು ತಾಳಲಾರೆನು! ನಿನ್ನೆ ವೈಭವದಿಂದ ನಲಿದಾಡುತ್ತಿದ್ದ ನಾನು, ಇಂದು ಗಹನಾರಣ್ಯದಲ್ಲಿ ಮುರಕ ಗುಡಿಯಲ್ಲಿ ದುಃಖಾಗ್ನಿಯಿಂದ ಬೆಂದು ಬೆಂಡಾಗಬೇಕಾಯಿತಲ್ಲವೆ? ಇಲ್ಲಿ ನನ್ನ ಸಂಗಡಿಗರೆಂದರೆ ಕಣ್ಣುಕಪ್ಪಡಿಗಳೇ ಸರಿ! ಹರ! ಹರ!! ಈ ಸ್ಥಿತಿಯು ಬರುವದೆಂಬದು ಯಾರಿಗೆ ಗೊತ್ತು?

ವಾಚಕ ಮಹಾಶಯ, ರಾಜಕುವರಿಯ ದುಃಖವನ್ನು ವರ್ಣಿಸುವದು ಅಂಥ ದುಃಖವನ್ನನುಭವಿಸದ ನಮ್ಮಿಂದಂತೂ ಆಗದು! ಅಸಾಮರ್ಥ್ಯವು ನಮ್ಮ ಲೇಖನಿಯಲ್ಲಿಲ್ಲ. ಅವಳು ಬಹಳ ಪರಿಯಿಂದ ದುಃಖಿಸಿದಳು. ದುಃಖಾಶ್ರು ಗಳಿಂದ ಅವಳ ಸೀರೆಯು ತೊಯ್ದುಹೋಯಿತು! ಕಣ್ಣುಗಳು ಉಬ್ಬಿ ಕೆಂಪ ಗಾದವು. ಅವಳ ದುಃಖವು ಹೆಚ್ಚುತ್ತ ಹೋಯಿತು. ಪಾಪ! ಆ ಕಟ್ಟಡವಿ ಯಲ್ಲಿ ಅವಳನ್ನು ಆರು ಸಮಾಧಾನಪಡಿಸಬೇಕು? ತನ್ನವರೆನ್ನುವವರು ಅಲ್ಲಿ ಯಾರು ಇರುವರು? ಕಡೆಗೆ ದೇವರಿಗೆ ದಯಬಂದಿತು ಈಶ್ವರೀ ತಂತ್ರಪ್ರಭಾವ ದಿಂದಲೋ ಅಥವಾ ಆ ರಾಜನಂದಿನಿಯ ಸುದೈವದಿಂದಲೋ ಅಲ್ಲಿಗೆ ಒಬ್ಬ ರಾಜ ಪುತ್ರನು ಬಂದನು. ಆತನು ಒಂದು ಹುಲಿಯನ್ನು ಬೆನ್ನಟ್ಟಿ ನಡೆದಿದ್ದನು. ಅವನ ಲಕ್ಷವೆಲ್ಲ ಆ ಕ್ರೂರಪ್ರಾಣಿಯ ಕಡೆಗೇ ಇತ್ತು. ಅವನನು ಅಶ್ವಾರೂಢ ನಾಗಿದ್ದು ಬಹುವೇಗವಾಗಿ ಕುದುರೆಯನ್ನೋಡಿಸುತ್ತಿದ್ದನು. ಆದರೆ ಆ ರಾಜ ಪುತ್ರನು ಆ ದೇಗುಲದ ಸಮೀಪಕ್ಕೆ ಹೋಗಲು ಅವನಿಗೆ ಆ ರಾಜನಂದಿನಿಯ ಕರ್ಣಕಠೋರವಾದ ರೋದನಧ್ವನಿಯು ಕೇಳಿಸಿತು. ಕೂಡಲೇ ಅವನು ಆ ಕ್ರೂರಪ್ರಾಣಿಯ ಹಂಬಲವನ್ನು ಬಿಟ್ಟು ಕುದುರೆಯನ್ನು ನಿಲ್ಲಿಸಿ ಆ ಧ್ವನಿಯನ್ನು ಆಲಿಸಿದನು. ಯಾವಳೋ ಒಬ್ಬ ಸ್ತ್ರೀಯು ಈ ಅರಣ್ಯದಲ್ಲಿ ವಿಪತ್ತಿಗೆ ಗುರಿ ಯಾಗಿರುವಳೆಂಬದು ತಿಳಿಯಿತು. ಆಗ ಅವನು ಆ ಧ್ವನಿಯನ್ನನುಲಕ್ಷಿಸಿ ಕುದುರೆಯನ್ನು ಬಿಟ್ಟನು. ಧ್ವನಿಯು ದೇವಾಲಯದಿಂದಲೇ ಕೇಳ ಬರುತ್ತಿದ್ದ ಧರಿಂದ ಕ್ಷಣದಲ್ಲಿ ಕುದುರೆಯು ಅಲ್ಲಿಗೆ ಹೋಗಿ ನಿಂತಿತು.

ರಾಜಪುತ್ರನು ಕುದುರೆಯಿಂದಿಳಿದು ದೇವಾಲಯವನ್ನು ಹೊಕ್ಕನು. ನೋಡುತ್ತಾನೆ! ಓರ್ವ ಸುಂದರ ತರುಣಿಯು ನೆಲಕ್ಕೆ ಬಿದ್ದು ಅಳುತ್ತಿದ್ದಳು. ಅಲ್ಲಿ ಆಕೆಯ ಹೊರತು ಯಾರೂ ಇದ್ದಿಲ್ಲ. ಆತನಿಗೆ ಆಶ್ಚರ್ಯವಾಯಿತು. ಆಗ ಅವನು ತರುಣಿಯ ಹತ್ತರಹೋಗಿ ನೆಲಕ್ಕೆ ಕಾಲುಬಡಿದನು.

ನಿರ್ಮಾನುಷವಾದ ಈ ದೇಗುಲದಲ್ಲಿ ತನ್ನನ್ನು ಅರಸುತ್ತ ಆ ಯವನರಾಜ ಪುತ್ರನೇ ಬಂದನೆಂದು ಆ ತರುಣಿಯು ಬೆಟ್ಟಿಬಿದ್ದು, ಚಿಟ್ಟನೆ ಚೀರಿ ಎರಡೂ ಕೈಗಳಿಂದ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಆಗ ರಾಜಪುತ್ರನು--"ತರುಣೀಮಣಿಯೇ, ಅಂಜಬೇಡ; ನಾನು ಮನುಷ್ಯನಿದ್ದೇನೆ. ನಿನ್ನ ಆರ್ತ ಧ್ವನಿಯನ್ನು ಕೇಳಿ ನಿನ್ನ ಕಷ್ಟನಿವಾರಣೆಗಾಗಿಯೇ ಇಲ್ಲಿಗೆ ಧಾವಿಸಿ ಬಂದಿದ್ದೇನೆ. ಅಂಜಬೇಡ. ಕಣ್ಣುತೆರೆ; ನಿನಗಾವ ದುಃಖವಾಗಿದೆಯೆಂಬದನ್ನು ಹೇಳು; ಆ ದುಃಖದಿಂದ ನಿನ್ನನ್ನು ಮುಕ್ತಳನ್ನಾಗ ಮಾಡುವೆನು" ಎಂದು ನುಡಿದನು.

ಆ ಧ್ವನಿಯನ್ನು ಕೇಳಿ ರಾಜನಂದಿನಿಗೆ ಕುಸ ಸಮಾಧಾನವಾಯಿತು. ಅವಳು ಕಣ್ಣುತೆರೆದು ನೋಡಿದಳು. ಸಕಲರಾಜಲಕ್ಷಣಮಂಡಿತನಾದ ಕ್ಷಾತ್ರ ವೀರನು ಎದುರಿಗೆ ನಿಂತುಕೊಂಡಿದ್ದನು. ಆತನನ್ನು ನೋಡಿದ ಕೂಡಲೇ ಆಕೆಯಲ್ಲಿ ಸಹಜವಾಗಿ ಲಜ್ಜಾಂಕುರವಾಯಿತು. ಕೂಡಲೆ ಅವಳು ಮೋರೆ ಯನ್ನು ತಗ್ಗಿಸಿದಳು. ಇಷ್ಟೊತ್ತಿನ ವರೆಗೆ ಹೃದಯದಲ್ಲಿ ಯಾವ ಅಗ್ನಿಯು ಆಕೆಯನ್ನು ದಹಿಸುತ್ತಿತ್ತೋ ಅದು ಪೂರಾ ಶಾಂತವಾಯಿತು. ಆಕೆಯಲ್ಲಿ ಪೂರ್ಣ ಸಮಾಧಾನವುಂಟಾಯಿತು. ಆಗ ಅವಳು "ಈ ವೀರನು ಯಾರಿರ ಬಹುದು?" ಎಂದು ಯೋಚಿಸಲಾರಂಭಿಸಿದಳು.

---

## ೫ನೆಯ ಪ್ರಕರಣ—ದುಷ್ಕರ್ಮಕ್ಕೆ ತಕ್ಕಫಲ.

ಪ್ರಿಯ ವಾಚಕರೇ, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಆ ನಿರ್ಜನಪ್ರದೇಶದ ದೇಗುಲದಲ್ಲಿ ರಾಜನಂದಿನಿಗೆ ಅಭಿವಚನವನ್ನಿತ್ತ ಆ ಕ್ಷಾತ್ರವೀರನು ಯಾವ ನಿರಬಹುದು? ರಾಜನಂದಿನಿಯಂತೆ ನಿಮಗೂ ಇದರ ಇಂಗಿತವು ತಿಳಿಯದಾಗಿದೆ.

ಯಲ್ಲವೆ? ನಮ್ಮ ಕಥಾನಕಕ್ಕೆ ಮಂಗಲಸ್ವರೂಪನಾದ ಆ ವೀರನು ಯಾರೆಂಬ ದನ್ನು ಇಲ್ಲಿ ವಿವರಿಸುವೆವು. ಕಥೆಯಕಡೆಗೆ ಅವಧಾನವಿರಲಿ.

ಅವಂತಿಕೆಯಲ್ಲಿ ವಸಂತಮಾಧವನೆಂಬ ರಾಜನಿದ್ದನು. ಆತನು ಪ್ರಜಾ ಹಿತದಕ್ಷನು; ಪ್ರಜೆಗಳಿಗೆ ಯಾವ ಬಗೆಯಿಂದಲೂ ಕಷ್ಟವಾಗಬಾರದೆಂದು ಆತನು ಹಗಲಿರುಳೂ ಪ್ರಯತ್ನಮಾಡುತ್ತಿದ್ದನು. ಇಂಥ ರಾಜನ ಆಳಿಕೆಯ ಲ್ಲಿದ್ದ ಪ್ರಜೆಗಳು ಸುಖ-ಸಮಾಧಾನಗಳಿಂದ ಸಂಸಾರಮಾಡುತ್ತಿದ್ದರೆಂಬದನ್ನು ಬೇರೆ ಹೇಳುವ ಕಾರಣವಿಲ್ಲ. ರಾಜನಲ್ಲಿ ಪ್ರಜಾವಾತ್ಸಲ್ಯ ಗುಣವಿರಬೇಕು. ಪ್ರಜೆಗಳಲ್ಲಿ ರಾಜನ ವಿಷಯವಾಗಿ ಅನುರಾಗವಿರಬೇಕು. ಹೀಗಿದ್ದರೇ ರಾಜ-ಪ್ರಜೆರಿಗೆ ಸೌಖ್ಯವಾಗುವದು. ಇಲ್ಲದಿದ್ದರೆ ಕರ್ತವ್ಯಪರಾಙ್ಮುಖರಾದವರು ಅಸುಖವನ್ನು ಹೊಂದುವರು. ಇರಲಿ.

ವಸಂತಮಾಧವನು ಇಂಥವನಿದ್ದಿಲ್ಲ. ಪ್ರಜೆಗಳೆಂದರೆ ಹೊಟ್ಟೆಯ ಮಕ್ಕಳಿ ಗಿಂತಲೂ ಹೆಚ್ಚೆಂದು ಭಾವಿಸುತ್ತಿದ್ದನು. ಇಂತಹ ಆ ಶ್ರೇಷ್ಠರಾಜನಿಗೆ ಮಕ್ಕ ಳಿದ್ದಿಲ್ಲ. ಅವನ ಐಶ್ವರ್ಯವೇನೋ ಅಪಾರವಾದದ್ದಿತ್ತು; ಅಸಂಖ್ಯಸೈನ್ಯವಿತ್ತು. ವಿಸ್ತಾರವಾದ ರಾಜ್ಯವಿತ್ತು; ಆದರೆ ಮಕ್ಕಳಿಲ್ಲದ್ದೊಂದೇ ಚಿಂತೆಯು ಅವನನ್ನು ಬಾಧಿಸುತ್ತಿತ್ತು. ಆದರೆ ಈ ಚಿಂತೆಯು ಅವನಿಗೆ ಕೊನೆಯವರೆಗೆ ಉಳಿಯಲಿಲ್ಲ. ಕೆಲದಿನಗಳ ಮೇಲೆ ಅವನಿಗೊಬ್ಬ ಮಗನು ಜನಿಸಿದನು. ಶಿಶುವು ಬಿದಿಗೆಯ ಚಂದ್ರನಂತೆ ಬೆಳೆಯಹತ್ತಿತು. ಅವನಿಗೆ ರತ್ನಾಕರನೆಂಬ ನಾಮಕರಣ ಮಾಡಿ ದರು. ಮಗನ ಮುದ್ದುಮುಖವನ್ನೂ ಬಾಲಲೀಲೆಗಳನ್ನೂ ನೋಡಿ ರಾಜನು ಸಂತೋಷಗೊಳ್ಳಹತ್ತಿದನು.

ಮಗನಮೇಲೆ ರಾಜನು ಪಂಚಪ್ರಾಣ; ಆತನನ್ನು ಬಹಳ ಮಮತೆ ಯಿಂದ ರಕ್ಷಿಸಿದನು. ವೃದ್ಧಾಪ್ಯದಲ್ಲಿ ಪುತ್ರಮುಖವನ್ನು ಕಾಣುವದೆಂದರೆ ಬಹಳ ಅಪರೂಪ; ಇಂಥ ಅಪರೂಪ ಸಂಗತಿಯು ಸಂಭವಿಸಿದರೆ ಯಾವ ಮಾನ ವನು ಆನಂದ ಹೊಂದಲಿಕ್ಕಿಲ್ಲ? ಹಾಗು ಮೋಹಪರವಶನಾಗಲಿಕ್ಕಿಲ್ಲ? ವಸಂತ ಮಾಧವನು ಹೀಗೆಯೇ ಮೋಹಪರವಶನಾಗಿ ಹೋಗಿದ್ದನು. ರತ್ನಾಕರನು ಬೆಳೆದು ದೊಡ್ಡವನಾದನು. ಅಕ್ಷರಾಭ್ಯಾಸವನ್ನೂ, ಶಸ್ತ್ರಾಸ್ತ್ರಗಳ ಅಭ್ಯಾಸ ವನ್ನೂ ಮಾಡಿದನು. ಅವನಲ್ಲಿ ತಾರುಣ್ಯವು ತಲೆದೋರಹತ್ತಿತು. ಚಿಕ್ಕತನ ದಲ್ಲಿದ್ದ ಅವನ ವಿವೇಕವು ತಾರುಣ್ಯದಲ್ಲಿ ನಷ್ಟವಾಯಿತು. ವೃದ್ಧರಾಜನು ಕೇವಲ

ಮಗನ ಅಧೀನನಾಗಿ ಹೋದ್ದರಿಂದ ರತ್ನಾಕರನ ಔದ್ಧತ್ಯವು ಹೆಚ್ಚಾಗಲು ಮತ್ತಿಷ್ಟು ಕಾರಣವಾಯಿತು. ಆತನು ದುಸ್ಸಂಗತಿಯನ್ನು ಹಿಡಿದನು ಸ್ವಾರ್ಥ ಸಾಧಕರಾದ ದುರ್ಜನರು ಪ್ರಾಯದಲ್ಲಿ ವಿವೇಕಶೂನ್ಯನಾದ ರತ್ನಾಕರನನ್ನು ಕೈವಶಪಡಿಸಿಕೊಂಡರು. ದುಸ್ಸಂಗತಿಯ ಪ್ರಭಾವವು ಅತರ್ಕ್ಯವಾದದ್ದು! ಬ್ರಹ್ಮನು ಸೃಷ್ಟಿಸಿದ ವಿಷಜಂತುಗಳಲ್ಲಿ ವಿಷವಿರುವದೆಂಬದೇನೋ ನಿಜ; ಆ ಜಂತುಗಳ ಒಂದೊಂದೇ ಅವಯವಗಳಲ್ಲಿ ವಿಷವಿರುತ್ತದೆ. ಆದರೆ ದುರ್ಜನರಿಗೆ ಮಾತ್ರ ಸರ್ವಾಂಗದಲ್ಲೂ ವಿಷವಿರುತ್ತದೆ. ಇಂಥ ದುರ್ಜನರ ಸಹವಾಸ ಮಾಡಿದವನು ಕ್ಷೇಮವೆಂಬ ಮಾತನ್ನು ಮರೆತು ಬಿಡಲೇ ಬೇಕು. ಪ್ರಸ್ತುತದಲ್ಲಿ ರತ್ನಾಕರನ ಸ್ಥಿತಿಯೂ ಹೀಗೆಯೇ ಆಯಿತು. ಅವನು ದುಸ್ಸಂಗತಿಯಿಂದ ತಂದೆಯನ್ನು ಮೀರಿನಿಂತನು. ಪ್ರಜೆಗಳಿಗೆ ತೊಂದರೆಕೊಡಲಾರಂಭಿಸಿದನು. ಅಷ್ಟಮದಗಳಲ್ಲಿ ಒಂದೊಂದರಿಂದಲೇ ಮಹಾ ಅನರ್ಥಗಳುಂಟಾತ್ತಿರುವಾಗ ಅಷ್ಟಮದಗಳು ಒತ್ತಟ್ಟಿಗೇ ಸೇರಿದಬಳಿಕ ಕೇಳುವದೇನು? ಆ ಅನರ್ಥಪರಂಪರೆಯನ್ನು ವರ್ಣಿಸಲೇ ತೀರದು. ರತ್ನಾಕರನಿಂದ ಪ್ರಜೆಗಳಿಗೆ ತಾಪವಾಗಹತ್ತಲು ರಾಜನೆಡೆಗೆ ದೂರುಬಂದಿತು. ಆಗ ಪ್ರಜಾಹಿತದಕ್ಷನಾದ ರಾಜನು ಕಳವಳಗೊಂಡನು. ಮಗನ ಮೇಲೆಷ್ಟೇ ಮೋಹವಿದ್ದರೂ ಪ್ರಜಾಹಿಂಸೆಯಾಯಿತೆಂಬ ದುಃಖದ ಮುಂದೆ ಅದು ನಿಲ್ಲಲಿಲ್ಲ. ಅವನು ಕವಿವರ್ಯ ಕಾಳಿದಾಸನ ಈ ಕೆಳಗಿನ ಮಾತನ್ನು ನೆನಪಿಗೆ ತಂದುಕೊಂಡನು:—

> ದ್ವೇಷ್ಯೋಽಪಿ ಸಂಮತಃ ಶಿಷ್ಟಸ್ತಸ್ಯಾರ್ತಸ್ಯ ಯಥೌಷಧಮ್ |
> ತ್ಯಾಜ್ಯೋ ದುಷ್ಟಃ ಪ್ರಿಯೋಽಪ್ಯಾಸೀದಂಗುಲೀವೋರಗಕ್ಷತಾ ||
>
> (ರಘುವಂಶ)

ಆದ್ದರಿಂದ ಮಗನ ಮೇಲೆ ಎಷ್ಟೇ ಮೋಹವಿದ್ದರೂ ಪ್ರಜಾಹಿಂಸೆಯಾಯಿತೆಂಬ ದುಃಖದ ಮುಂದೆ ಅದು ನಿಲ್ಲಲಿಲ್ಲ. ನಿಜವಾದ ರಾಜರ ಸ್ಥಿತಿಯು ಹೀಗೆಯೇ ಇರುವದು. ವಸಂತಮಾಧವನು ಮಗನ ಮೇಲಿನ ಮೋಹವನ್ನು ಬಿಸುಟಿ, ಆತನನ್ನು ತನ್ನೆದುರಿಗೆ ಕರೆಯಿಸಿ, ನ್ಯಾಯವಿಚಾರಣೆ ನಡೆಸಿದನು. ವಿಚಾರಾಂತ್ಯದಲ್ಲಿ ಮಗನು ನಿರಪರಾಧಿಗಳಾದ ಪ್ರಜೆಗಳನ್ನು ಹಿಂಸಿಸಿ, ಅಪರಾಧಿಯಾಗಿರುವನೆಂಬದು ಕಂಡುಬಂದಿತು. ಆಗ ರಾಜನು ಮಗನೆಂಬ ಮೋಹಕ್ಕೆ ಒಳಗಾಗಲಿಲ್ಲ. ತಾನು ಇದುವರೆಗೆ ಹ್ಯಾಗೆ ನಿಷ್ಪಕ್ಷಪಾತ ಬುದ್ಧಿಯಿಂದ ಪ್ರಜೆ

ಗಳಿಗೆ ನ್ಯಾಯದಾನ ಮಾಡುತ್ತ ಬಂದಿದ್ದನೋ ಅದರಂತೆ ತತ್‌ಕ್ಷಣದಲ್ಲಿ ತೀರ್ಪು ಹೇಳಿದನು. ಪ್ರಜೆಗಳು ಈ ಪ್ರಸಂಗದಲ್ಲಿ ರಾಜನು ಹ್ಯಾಗೆ ನಿರ್ಣಯ ಹೇಳು ತ್ತಾನೋ ಎಂಬದರ ಕಡೆಗೆ ಲಕ್ಷ್ಯವಿಟ್ಟಿದ್ದರು. ಒಬ್ಬನೇ ಮಗನು; ಅದರಲ್ಲೂ ಬಹುದಿವಸಕ್ಕೆ ಹುಟ್ಟಿದವನು; ಕೇವಲ ಅಚ್ಛೆಯಿಂದ ಬೆಳೆದವನು. ರಾಜನಿಗೆ ಪಂಚಪ್ರಾಣದಂತಿದ್ದವನು. ಇಂಥವನ ವಿಷಯವಾಗಿ ರಾಜನು ಯಾವ ತೀರ್ಪು ಹೇಳುವನೋ ಎಂದು ಪ್ರಜೆಗಳು ಉತ್ಸುಕರಾದದ್ದು ಸ್ವಾಭಾವಿಕವೇ ಸರಿ! ಆದರೆ ನ್ಯಾಯ ನಿಷ್ಠುರರಾದ ರಾಜರು ಮೋಹಕ್ಕೆ ಒಳಗಾಗುವರೇ? ಅವರು ತಮ್ಮ ಕರ್ತವ್ಯವನ್ನು ಸ್ಮರಿಸಿ ಮಾಡತಕ್ಕದ್ದನ್ನು ಮಾಡಿಯೇ ತೀರುವರು. ರಾಜ ಶೇಖರ ವಿಳಾಸದಲ್ಲಿ:—ಓರ್ವ ಶಿವಭಕ್ತಳಾದ ತಿರುಕೊಳವಿನಾಚಿಯ ಮಗುವಿನ ಹತ್ಯವು ರಾಜಪುತ್ರ-ರಾಜಶೇಖರನಿಂದಾದದ್ದಕ್ಕೆ ಅವನ ನ್ಯಾಯನಿಷ್ಠುರನಾದ ತಂದೆಯು ಅವನಿಗೆ ಎಂಥ ಭಯಂಕರ ಶಿಕ್ಷೆಯನ್ನು ವಿಧಿಸಿದನು? ತನ್ನಷ್ಟಕ್ಕೆ ತಾನೇ ಆತ್ಮಹತ್ಯ ಮಾಡಿಕೊಳ್ಳಬೇಕೆಂಬ ಭಯಂಕರ ಶಿಕ್ಷೆಯನ್ನು ಅವನ ಪ್ರೇಮದ ತಂದೆಯು ಅವನಿಗೆ ಹೇಳಿದ್ದು ಅವನ ನ್ಯಾಯನಿಷ್ಠುರತೆಯನ್ನು ಚನ್ನಾಗಿ ವ್ಯಕ್ತಮಾಡುತ್ತದಲ್ಲವೇ? ರಾಜಧರ್ಮವು ಇಷ್ಟು ಕಠೋರವಾಗಿರು ವದು. ಇರಲಿ.

ಪ್ರಸ್ತುತದಲ್ಲಿ ವಸಂತಮಾಧವನು ತನ್ನ ತರುವಾಯ ಪಟ್ಟಕ್ಕೆ ಯಾರು ಬಾಧ್ಯಸ್ತರು ಎಂಬದನ್ನು ಕೂಡಾ ಯೋಚಿಸದೆ ಮಗನನ್ನು ಕುರಿತು—ನ್ಯಾಯ ನಿರ್ಣಯದಲ್ಲಿ ನೀನು ಅಪರಾಧಿಯೆಂದು ಕಂಡು ಬಂದದ್ದರಿಂದ ನಿನಗೆ ನಾನು ಶಿಕ್ಷೆಯನ್ನು ವಿಧಿಸುವದು ನನ್ನ ಕರ್ತವ್ಯವಾಗಿದೆ. ನೀನು ಇಂದಿನಿಂದ ಆರು ತಿಂಗಳವರೆಗೆ ನನ್ನ ರಾಜ್ಯದಲ್ಲಿರಕೂಡದು. ಹಾಗು ನನಗೆ ಮುಖವನ್ನು ತೋರಿಸ ಕೂಡದು. ಆರುತಿಂಗಳು ಕ್ರಮಿಸಿದ ಬಳಿಕ ನೀನು ಪುನಃ ನನ್ನ ರಾಜ್ಯಕ್ಕೆ ಬಂದು ನನಗೆ ಮೋರೆ ತೋರಿಸಬೇಕು. ಇದೇ ನಿನಗೆ ನಾನು ವಿಧಿಸಿದ ಶಿಕ್ಷೆ ಯು! ಎಂದು ನುಡಿದು ಸಭೆಯಿಂದ ಹೊರಟು ಹೋದನು.

ರಾಜನ ತೀರ್ಪನ್ನು ನೋಡಿ ಪ್ರಜೆಗಳಿಗೆ ಆಶ್ಚರ್ಯವಾಯಿತು ನಮ್ಮ ರಾಜನು ನಿಜವಾಗಿ ಸತ್ಯವಂತನೂ, ಧರ್ಮಿಷ್ಠನೂ ಇರುವನೆಂದು ಕೊಂಡಾಡಿ ದರು. ರತ್ನಾಕರನಿಗೆ ಈ ತೀರ್ಪಿನಿಂದ ಬಹಳ ಅಸಮಾಧಾನವಾಯಿತು. ಆಗ ಅವನು ಕೃತಕರ್ಮಕ್ಕೆ ಪಶ್ಚಾತ್ತಾಪಪಟ್ಟು ಇತಃಪರ ದುಸ್ಸಂಗತಿ ಮಾಡಲಿಕ್ಕೆ

ಲ್ಲವೆಂದು ನಿಶ್ಚಯ ಮಾಡಿದನು. ದುಸ್ಸಂಗತಿಗೆ ಬಿದ್ದದರಿಂದಲೇ ತಾನು ಹೀಗೆ ರಾಜದಂಡನೆಗೆ ಗುರಿಯಾಗಬೇಕಾಯಿತೆಂದು ತಿಳಿದು ಬಹಳ ಹಳಹಳಿಸಿದನು. ಆದರೆ ಮಾಡುವದೇನು? ರಾಜಶಾಸನವನ್ನು ಅನುಭವಿಸಿಯೇ ತೀರಬೇಕಾಯಿತು. ಆಗ ಅವನು ತನಗೆ ಬೇಕಾಗುವ ಶಸ್ತ್ರಾಸ್ತ್ರಗಳನ್ನು ತಕ್ಕೊಂಡು ತನ್ನ ಪ್ರೀತಿಯ 'ನೀಲಮೇಘ'ವೆಂಬ ಕುದುರೆಯನ್ನೇರಿ ಅವಂತಿಯ ರಾಜ್ಯದಿಂದ ಹೊರಹೊರಟನು. ಸರಿಕರಾದ ಬೇರೆ ಯಾವ ರಾಜರನ್ನೂ ಆಶ್ರಯಿಸದೆ ಆರು ತಿಂಗಳವರೆಗೆ ವನಚರನಾಗಿಯೇ ಕಾಲಕ್ರಮಿಸಬೇಕೆಂದು ನಿರ್ಧರಿಸಿದನು. ಅವನು ತೇಜಸ್ವಿಯೂ, ಬಲಿಷ್ಠನೂ ಆಗಿದ್ದನು. ನಿರ್ಧಾರದಂತೆ ಕೆಲಸ ಕೊನೆಗಾಣಿಸುವ ದಾರ್ಢ್ಯವೂ ಅವನಲ್ಲಿತ್ತು. ಆದ್ದರಿಂದ ಅವನು ಯಾವ ದುಃಖಗಳಿಗೂ ಸೊಪ್ಪುಹಾಕದೆ ಮಿಥಿಲಾರಾಜ್ಯದಲ್ಲಿಯ ಒಂದು ಅರಣ್ಯದಲ್ಲಿ ಗೌಪ್ಯವಾಗಿ ವಾಸಿಸಿದನು.

ಹೀಗೆ ಅರಣ್ಯವಾಸಿಯಾದ ರತ್ನಾಕರನೇ ಇಂದು ಒಂದು ಹುಲಿಯನ್ನು ಬೆನ್ನಟ್ಟಿ, ಮಿಥಿಲಾರಾಜನಂದಿನಿಯು ಪ್ರಲಾಪಿಸುತ್ತಿದ್ದ ದೇವಾಲಯಕ್ಕೆ ಬಂದನು. ಆತನ ಆರು ತಿಂಗಳ ಶಿಕ್ಷೆಯು ಅವಧಿಯು ತುಂಬಿತ್ತು. ಈ ಅವಧಿಯಲ್ಲಿ ಅವನು ಬಹಳ ಅನುಭವವನ್ನು ಹೊಂದಿ ವಿವೇಕಶಾಲಿಯಾಗಿದ್ದನು. ಮೊದಲಿನ ವಿವೇಕಭ್ರಷ್ಟತೆಯು ಈಗ ಅವನಲ್ಲಿ ಉಳಿದಿದ್ದಿಲ್ಲ. ಅವನು ಸಮಂಜಸನೂ, ಪ್ರೋಕ್ತನೂ ಆಗಿದ್ದನು. ಈ ಬುದ್ಧಿವೈಭವದಿಂದ ಅವನ ಮುಖಕಾಂತಿಯು ದೇದೀಪ್ಯಮಾನವಾಗಿತ್ತು. ಅವನ ಈ ದಿವ್ಯ ತೇಜಸ್ಸನ್ನು ನೋಡಿಯೇ ರಾಜನಂದಿನಿಯು ಲಜ್ಜಾಭರದಿಂದ ಮುಖತಗ್ಗಿಸಿ ವಿಚಾರವಶಳಾದಳು.

ಹೀಗೆ ವಿಚಾರಪರಳಾದ ರಾಜನಂದಿನಿಯು ಕೆಲಹೊತ್ತಿನವರೆಗೆ ಮಾತಾಡದಿರಲು, ರತ್ನಾಕರ ರಾಜಪುತ್ರನು ಪುನಃ ವಿಚಾರಿಸಿದನು ಆಗ ರಾಜನಂದಿನಿಯು ಲಜ್ಜೆಯನ್ನು ತ್ಯಜಿಸಿ—"ಕ್ಷತ್ರಿಯ ವೀರನೇ, ನಿನಗೆ ಕಲ್ಯಾಣವಾಗಲಿ! ಮಹಾ ವಿಪತ್ತಿನಲ್ಲಿ ಮುಳುಗಿದ ನನಗೆ ನಿನ್ನ ದರ್ಶನಮಾತ್ರದಿಂದಲೇ ಪೂರ್ಣ ಸಮಾಧಾನವಾಯಿತು. ಇನ್ನು ನಾನು ಆ ಯವನ ರಾಜಪುತ್ರನ ಭೀತಿಯನ್ನು ಸ್ವಲ್ಪವೂ ತಾಳಲಾರೆನು. ನಾನು ಮಿಥಿಲಾನಗರದ ರಾಜನಂದಿನಿಯಿರುತ್ತೇನೆ. ನೀನು ಕ್ಷಾತ್ರವೀರನಿರುತ್ತೀ; ನನ್ನ ಮಾನರಕ್ಷಣೆಯ ಅಭಿಮಾನವು ನಿನಗಿರುತ್ತದೆ" ಎಂದು ನುಡಿದು ಯವನ ರಾಜಪುತ್ರನಾರೆಂಬದನ್ನೂ, ಅವನು ತನ್ನನ್ನು ಹ್ಯಾಗೆ

ಅಪಹರಿಸಿ ಈ ಬಗೆಯ ಸಂಕಟಕ್ಕೀಡುಮಾಡಿದನೆಂಬದನ್ನೂ, ತಾನು ಅವನಿಂದ ಪಾರಾದ ರೀತಿಯನ್ನೂ, ಅವನು ಎಲ್ಲಿರುವನೆಂಬದನ್ನೂ ಸವಿಸ್ತರವಾಗಿ ಹೇಳಿದಳು. ಆಕೆಯು ಹೇಳುತ್ತಿರುವಾಗ ರತ್ನಾಕರನು ಯವನರಾಜಪುತ್ರನ ವಿಷಯವಾಗಿ ಕ್ರೋಧ-ಸಂತಾಪಗಳನ್ನು ತಾಳುತ್ತಿದ್ದನು.

ರಾಜನಂದಿನಿಯ ಮಾತು ಮುಗಿಯಿತು. ಆಗ ರತ್ನಾಕರನು ವೀರಶ್ರೀಯಿಂದ ಯುಕ್ತನಾಗಿ—"ರಾಜಕುವರೀ, ಏನೂ ಯೋಚನೆ ಮಾಡಬೇಡ. ನಿನ್ನ ರಕ್ಷಣೆಗಾಗಿಯೇ ಭಗವಂತನು ನನ್ನನ್ನು ನಿನ್ನ ಬಳಿಗೆ ಕಳಿಸಿದಂತಾಗಿದೆ. ಯವನ ರಾಜಪುತ್ರನು ನಿನ್ನನ್ನು ಅರಸುತ್ತ ಬಂದರೆ ಆತನನ್ನು ಅರಕ್ಷಣದಲ್ಲಿ ಯಮಸದನಕ್ಕಟ್ಟುವೆನು. ಭರತಖಂಡದಲ್ಲಿ ಕ್ಷಾತ್ರವೀರರಿರುವರೆಂಬ ಅನುಭವವನ್ನು ಅವನಿಗೆ ತಂದುಕೊಡುವೆನು" ಎಂದು ನುಡಿದು ಆಕೆಯನ್ನು ಸಂತೈಸಿದನು.

ಹೀಗೆ ಅವರಿಬ್ಬರು ಮಾತಾಡುತ್ತಿರುವಷ್ಟರಲ್ಲಿ ಕಾಮುಕನಾದ ಯವನ ರಾಜಪುತ್ರನು ರಾಜನಂದಿನಿಯನ್ನು ಹುಡುಕುತ್ತ ಅಲ್ಲಿಗೇ ಬಂದನು. ಕೈಗೆಸಿಕ್ಕ ಬೇಟೆಯು ತಪ್ಪಿಸಿಕೊಂಡದ್ದಕ್ಕೆ ಅವನಿಗೆ ಹುಚ್ಚು ಹಿಡಿದಂತಾಗಿತ್ತು. ಈ ಗಗನ ಚುಂಬಿತವಾದ ವೃಕ್ಷಗಳಿಂದ ಸಂದಣಿತವಾದ ಈ ಕಟ್ಟಡವಿಯಲ್ಲಿ ಆ ಅಬಲೆಯು ಹೋಗುವದೆಲ್ಲಿಗೆ? ಎಂಬ ಧೈರ್ಯದಿಂದಲೇ ಅವನು ರಾಜಪುತ್ರಿಯನ್ನು ಅಲ್ಲಲ್ಲಿ ಹುಡುಕಿ ದೇಗುಲಕ್ಕೆ ಬಂದಿದ್ದನು. ಆತನು ತನ್ನ ತರ್ಕದಂತೆ ರಾಜಪುತ್ರಿಯು ಗುಡಿಯಲ್ಲಿರುವದನ್ನು ನೋಡಿದನು. ಆದರೆ ಆಕೆಯ ಬಳಿಯಲ್ಲಿ ಬೇರೊಬ್ಬ ಕ್ಷಾತ್ರವೀರನು ನಿಂತುಕೊಂಡದ್ದನ್ನು ನೋಡಿ ಅವನಿಗೆ ವಿಲಕ್ಷಣ ಸಂತಾಪ ವಾಯಿತು ಈತನು ತನ್ನ ಬೇಟೆಯನ್ನು ಅಪಹರಿಸಿರುವನೆಂದು ಭಾವಿಸಿ, ಈಗಲೇ ಇವನನ್ನು ಯಮಸದನಕ್ಕಟ್ಟುವೆನೆಂದು ಖಡ್ಗವನ್ನು ಹಿರಿದು ಯುದ್ಧಕ್ಕೆ ಸಿದ್ಧನಾದನು. ರತ್ನಾಕರನಾದರೂ ಕಡಿಮೆಯವನಿದ್ದಿಲ್ಲ. ರಾಜನಂದಿನಿಯಿಂದ ಈತನೇ ಆ ಯವನ ರಾಜಪುತ್ರನೆಂದರಿತು, ತತ್‍ಕ್ಷಣದಲ್ಲಿಯೇ ಅವನೊಡನೆ ಕಾಳಗಕ್ಕೆ ಉಪಕ್ರಮಿಸಿದನು. ಯವನ ರಾಜಪುತ್ರನು ಖಡ್ಗಪ್ರಹಾರ ವಿದ್ಯೆಯಲ್ಲಿ ನಿಷ್ಣಾತನಿದ್ದದರಿಂದ ಈತನನ್ನು ಸುಲಭವಾಗಿ ಕೊಲ್ಲುವೆನೆಂದು ತಿಳಿದನು. ಆದರೆ ಯುದ್ಧಕ್ಕೆ ಪ್ರಾರಂಭವಾದ ಬಳಿಕ ಪ್ರತಿಸ್ಪರ್ಧಿಯು ತನಗಿಂತಲೂ ಬಲಿಷ್ಠನಿರುವನೆಂಬ ಅನುಭವವು ಅವನಿಗೆ ಬಂದಿತು. ರತ್ನಾಕರನು ಸದುದ್ದೇಶ ಪ್ರೇರಿತನು. ಯವನ ರಾಜಪುತ್ರನು ದುರುದ್ದೇಶ ಪ್ರೇರಿತನು. ಆತನು ರಾಜನಂದಿನಿಯು

ಅಪಹರಣದಂಥ ದುಷ್ಕರ್ಮಕ್ಕೆ ಕೈಹಾಕಿದವನು. ಅಂದಬಳಿಕ ರತ್ನಾಕರನ ತೇಜಸ್ಸಿನಮುಂದೆ ನಿಲ್ಲುವದು ಅವನಿಗೆ ಅಶಕ್ಯವಾಯಿತು. ಅವರಿಬ್ಬರೂ ತಾಸೆ ರಡುತಾಸು ಯುದ್ಧಮಾಡಿದ ಬಳಿಕ ರತ್ನಾಕರನು ಒಳ್ಳೇ ರೊಚ್ಚಿನಿಂದ ಅವನ ಆಯಕಟ್ಟಿಗೆ ಖಡ್ಗದಿಂದ ಹೊಡೆದನು. ಆ ಪೆಟ್ಟನ್ನು ತಪ್ಪಿಸಿಕೊಳ್ಳುವದು ಆ ಯುವನ ರಾಜಪುತ್ರನಿಂದಾಗಲಿಲ್ಲ. ಕೂಡಲೇ ಅವನು ಅಲ್ಲಾನ ಸ್ಮರಣೆ ಮಾಡುತ್ತ ನೆಲಕ್ಕುರುಳಿದನು! 'ದುಷ್ಟಕರ್ಮಕ್ಕೆ ತಕ್ಕಫಲ' ವೆಂಬದನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡುವದೋ ಏನೋ ಎಂಬಂತೆ ಅವನ ಜಡದೇಹವು ಭೂಮಿಯ ಮೇಲೆ ಬಿದ್ದುಬಿಟ್ಟಿತು. ದುಷ್ಕರ್ಮಕ್ಕೆ ದುಷ್ಫಲವು ನ್ಯಾಯಸಮ್ಮತವಲ್ಲವೆ?

---

## ೬ನೆಯ ಪ್ರಕರಣ—ಪ್ರೇಮಪಾಶ.

ಜಗತ್ತಿನಲ್ಲಿ ಪ್ರೇಮವೆಂಬ ವಸ್ತುವು ಅತ್ಯದ್ಭುತವಾಗಿರುತ್ತದೆ. ಈ ಅದೃಶ್ಯ ವಸ್ತುವಿನ ಬೆಲೆಯನ್ನು ಯಾರೂ ಕಟ್ಟಲಾರರು. ಜಗತ್ತಿನ ರಕ್ಷಣೆಗೆ ಇದೇ ಕಾರಣವಾಗಿದೆ. ಪ್ರೇಮವೆಂಬ ವಸ್ತುವು ಇರದಿದ್ದರೆ ಜಗತ್ತು ವಿಕೃತರೂಪವನ್ನು ಹೊಂದಿ ಯಾವಾಗೋ ನಾಶಪಥವನ್ನು ಹಿಡಿಯುತ್ತಿತ್ತು; ಇದ್ದರಿಂದಲೇ ವಿಧಾತನು ಪ್ರೇಮವೆಂಬ ವಸ್ತುವನ್ನು ಬಹುಕುಶಲತೆಯಿಂದ ನಿರ್ಮಿಸಿರುವನು. ಪ್ರೇಮದಿಂದಲೇ ಸೃಷ್ಟಿಯ ಉತ್ಪತ್ತಿಯಾಗುವದು; ಪ್ರೇಮದಿಂದಲೇ ಸೃಷ್ಟಿಯ ರಕ್ಷಣೆಯಾಗುವದು; ಪ್ರೇಮಾಭಾವದಿಂದಲೇ ಸೃಷ್ಟಿಯು ನಾಶವನ್ನು ಹೊಂದುವದು. ಇಂಥ ಪ್ರೇಮವೇ ಸೃಷ್ಟಿಯಲ್ಲಿಯ ಅನೇಕ ಬಗೆಯ ಕ್ರಾಂತಿಗಳಿಗೆ ಕಾರಣವಾಗಿರುತ್ತದೆ. ಪ್ರೇಮಾಭಾವದಿಂದ ಪ್ರಾಣಿಮಾತ್ರರಿಗೆ ದುಃಖವಾಗುತ್ತದೆ. ಆದರೆ ಪ್ರೇಮದಿಂದ ಕಲ್ಪನಾತೀತವಾದ ಸೌಖ್ಯವಾಗುತ್ತದೆ. ಇಂಥ ಶಕ್ತಿಸಂಪನ್ನವಾದ ಪ್ರೇಮದ ಮಹಿಮೆಯನ್ನು ಬಲ್ಲವರು, ಇದಕ್ಕೆ ಹೃದಯದಲ್ಲಿ ಅಖಂಡವಾಗಿ ಸ್ಥಾನವನ್ನು ಕೊಡುವರು. ಪ್ರೇಮಕ್ಕೆ ನಿರಂತರವಾಗಿ ಹೃದಯದಲ್ಲಿ ಇಂಬುಗೊಡುವವರೇ ಮಹಾತ್ಮರು; ಅವರೇ ದೊಡ್ಡವರು. ಆದರೆ ಪ್ರೇಮದ ರಹಸ್ಯವನ್ನು ಅರಿಯದ ಅಜ್ಞಾನಿಗಳಾದ ನಾವು ನಿರಂತರವಾಗಿ ಅದಕ್ಕೆ ಹೃದಯದಲ್ಲಿ ಸ್ಥಾನ ಕೊಡುವದಿಲ್ಲ. ಅಂತೇ ನಾವು ಸುಖ-ದುಃಖ

ಗಳೆಂಬ ದ್ವಂದ್ವಗಳಿಗೆ ಒಳಗಾಗುತ್ತೇವೆ. ಇರಲಿ. ಇಂಥ ಅದ್ಭುತ ಪ್ರೇಮ ದಿಂದ ದುಃಖಿತ ಪ್ರಾಣಿಗಳು ಹೇಗೆ ಮೋದಗೊಳ್ಳುತ್ತವೆಂಬದನ್ನು ನೋಡೋಣ!

ಮಿಥಿಲಾ ರಾಜನಂದಿನಿಯು ಅಗಾಧವಾದ ದುಃಖಕ್ಕೆ ಗುರಿಯಾಗಿದ್ದಳಷ್ಟೆ; ಯವನ ರಾಜಪುತ್ರನು, ಸಮಾನ ಧರ್ಮದವನಲ್ಲ, ಸಮಾನ ಶೀಲದವನಲ್ಲ, ತನಗೆ ಅನುರೂಪನಲ್ಲ ಎಂಬ ಭಾವನೆಯು ಆ ರಾಜನಂದಿನಿಯಲ್ಲಿ ಉಂಟಾದ್ದರಿಂದಲೇ ಅವಳು ಆ ಯವನ ರಾಜಪುತ್ರನ ವಿಷಯವಾಗಿ ಪ್ರೇಮಶೂನ್ಯಳಾದಳು. ಆ ತರುಣಿಯು ಹಿಂದೂಸಂಸ್ಕೃತಿಯ ಪೂರ್ಣ ಭಕ್ತಳಿದ್ದಳು. ಹಿಂದು ಧರ್ಮ ವನ್ನು ಮನಮುಟ್ಟಿ ಪ್ರೀತಿಸುತ್ತಿದ್ದಳು. ಕೊನೆಯವರೆಗೆ ಹಿಂದೂಧರ್ಮದಲ್ಲಿ ಯೇ ಇರಬೇಕೆಂಬ ಇಚ್ಛೆಯುಳ್ಳವಳು. ಅವಳ ಈ ಧರ್ಮಪ್ರೇಮಕ್ಕೆ ಯಾವ ವಿಷಯಸುಖವೂ ತಡೆಯನ್ನುಂಟುಮಾಡಲು ಸಮರ್ಥವಾಗಲಿಲ್ಲ. ಯವನ ರಾಜ ಪುತ್ರನ ವೈಭವವು ಆಕೆಯನ್ನು ಮರುಳುಗೊಳಿಸಲಿಲ್ಲ. ಅವನ ಸುಂದರ ರೂಪವು ಆಕೆಯಲ್ಲಿ ವಿಷಯವಾಸನೆಯನ್ನು ಹೆಚ್ಚಿಸಲಿಲ್ಲ ಅಂತೇ ಅವಳು ಆ ಅಪಹರಣದಿಂದ ಮರಣಪ್ರಾಯವಾದ ದುಃಖವನ್ನು ಹೊಂದಿದಳು. ಇದು ಧರ್ಮ ಹಾಗು ಶೀಲದಲ್ಲಿರುವ ಪ್ರೇಮದ ದ್ಯೋತಕವೆಂದೇ ಹೇಳಬಹು ದಾಗಿದೆ. ಆದರೆ ಯಾರಿಗೆ ಸ್ವಧರ್ಮ ಹಾಗು ಶೀಲಗಳ ವಿಷಯವಾಗಿ ನಿಜವಾದ ಪ್ರೇಮವಿರುವದಿಲ್ಲವೋ ಅವರು ಅಲ್ಪ ಸುಖಕ್ಕಾಗಿ-ವಿಷಯಸುಖಕ್ಕಾಗಿ ಧರ್ಮ ಹಾಗು ಶೀಲಗಳಿಗೆ ತಿಲಾಂಜಲಿಯನ್ನು ಸಮರ್ಪಿಸುವರು. ಧರ್ಮ ಹಾಗು ಶೀಲಭ್ರಷ್ಟರಾದ ಪುರುಷರು ತಮ್ಮ ಸಂಸ್ಕೃತಿಗೆ ಒಪ್ಪದ ಪರಸ್ತ್ರೀಯರಲ್ಲಿ ರಮಿ ಸುವದನ್ನೂ, ಧರ್ಮ ಹಾಗು ಶೀಲಭ್ರಷ್ಟರಾದ ಸ್ತ್ರಿಯರು ಪರಪುರುಷರಲ್ಲಿ ರಮಿ ಸುವದನ್ನೂ ನೋಡಿದರೆ ಇದೆಲ್ಲ ವಿಷಯಸುಖದ ಬಲವಾದ ಪ್ರೇಮಪಾಶದ ಪ್ರಭಾವವೆಂದೇ ಹೇಳಬೇಕಾಗುತ್ತದೆ.

ಪ್ರೇಮವು ಒಂದೇಯಾದರೂ ಸ್ಥಾನಭೇದದಿಂದ ಅದರ ವ್ಯಾವಹಾರಿಕ ಯೋಗ್ಯತೆಯಲ್ಲಿ ಹೆಚ್ಚು ಕಡಿಮೆಯಾಗುತ್ತದೆ. ಅಯೋಗ್ಯಸ್ಥಾನವಲ್ಲಿಯ ಪ್ರೇಮವು ನಿಂದ್ಯವು; ಆದರೆ ಯೋಗ್ಯಸ್ಥಾನಗಲ್ಲಿಯ ಪ್ರೇಮವು ಶ್ಲಾಘನೀಯವು. ಮಿಥಿಲಾ ರಾಜನಂದಿನಿಯು ಇಂಥ ಶ್ಲಾಘನೀಯ ಪ್ರೇಮವನ್ನೇ ಅಪೇಕ್ಷಿಸುತ್ತಿದ್ದಳು. ಅವಳ ಆ ಪವಿತ್ರ ಪ್ರೇಮೋದಯಕ್ಕೆ ಸಮಯವು ಒದಗಿತು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಕ್ಷಾತ್ರರಾಜಕುವರನಾದ ರತ್ನಾಕರನು

ಯುವನ ರಾಜಪುತ್ರನನ್ನು ಸಂಹರಿಸಿದ ಬಳಿಕ ಮಿಥಿಲಾ ರಾಜನಂದಿನಿಯು ಬಳಿಗೆ ಬಂದನು. ರತ್ನಾಕರನ ಪರಾಕ್ರಮವನ್ನು ಕಣ್ಮುಟ್ಟನೋಡಿದ ಆ ರಾಜನಂದಿನಿಯಲ್ಲಿ ಆತನ ವಿಷಯವಾಗಿ ತುಂಬಾ ಆದರವುಂಟಾಯಿತು. ಒಬ್ಬರನ್ನು ಕಂಡು ಮತ್ತೊಬ್ಬರಿಗೆ ಪ್ರೇಮಾದರಗಳು ನಿರ್ವ್ಯಾಜದಿಂದುಂಟಾಗಬೇಕಾದರೆ ಪೂರ್ವ ಋಣಾನುಬಂಧವೇ ಇರಬೇಕಾಗುತ್ತದೆ. ಮಿಥಿಲಾ ರಾಜನಂದಿನಿಯು ಆ ಕ್ಷಾತ್ರ ವೀರನನ್ನು ನೋಡಿದ ಕೂಡಲೆ ಸದ್ಭಾವನೆಯುಳ್ಳವಳಾಗಿದ್ದಳು. ಅದರಂತೆ ಆ ವೀರನಿಗಾದರೂ ಆಕೆಯನ್ನು ನೋಡಿದ ಕೂಡಲೆ ಆತ್ಮೀಯಭಾವವು ಜಾಗ್ರತವಾಗಿತ್ತು. ಹೀಗಿರಲು ಆ ತರುಣನು ಶತ್ರುವನ್ನು ಸಂಹಂಸಿ ತನ್ನ ಸಂಕಟ ನಿವಾರಣೆ ಮಾಡಲು, ಉಪಕೃತಳಾದ ಆ ತರುಣಿಯು ರತ್ನಾಕರನ ವಿಷಯವಾಗಿ ಸಹಜವಾಗಿ ಪ್ರೇಮಾದರಗಳನ್ನು ತಾಳಬೇಕಾಯಿತು. ರಾಜನಂದಿನಿಯು ಸ್ಮಿತ ಮುಖದಿಂದ ಕ್ಷಾತ್ರವೀರನನ್ನು ಆದರಿಸುತ್ತಿರಲು, ರತ್ನಾಕರನು ವಿಜಯದ ಉಬ್ಬಿನಿಂದ—"ರಾಜಕನ್ನಿಕೆಯೇ, ಇನ್ನು ಮುಂದೆ ಸ್ವಲ್ಪವೂ ಬೆದರ ಬೇಡ. ಅವಂತಿನಗರದ ರಾಜಪುತ್ರನಾದ ನಾನು ನಿನ್ನ ಬಳಿಯಲ್ಲಿರುತ್ತಿರಲು ಅದಾವ ನೀಚನು ನಿನಗೆ ತೊಂದರೆ ಕೊಡುವನು? ಭಾರತಕ್ಷತ್ರಿಯರ ವೀರಬಾಹುಗಳ ಪರಿಚಯವು ಇಲ್ಲವೆಂತಲೇ ಈ ಯವನ ರಾಜಪುತ್ರನು ಇಷ್ಟೊಂದು ದಾರಿಯನ್ನು ಕ್ರಮಿಸಿ ಇಲ್ಲಿಗೆ ಬಂದಿರುವನು! ಅವನು ಈದಿನ ಚೆನ್ನಾಗಿ ಅನುಭವಹೊಂದಿ ತನ್ನ ಪೂರ್ವಜರಿಗೆ ಸುದ್ದಿಯನ್ನು ಹೇಳುವದಕ್ಕಾಗಿ ಹೊರಟು ಹೋದನು! ಈ ವಿಷಯಾಸಕ್ತರಿಗೆ ಹೀಗೆಯೇ ಶಾಸನವಾಗಬೇಕು!" ಎಂದು ನುಡಿದನು.

ಈ ಮಾತು ಕೇಳಿ ರಾಜನಂದಿನಿಯು—"ರಾಜಪುತ್ರರೇ, ಇಂಥ ಮಹತ್ವದ ಪ್ರಸಂಗದಲ್ಲಿ ನೀವು ಇಲ್ಲಿಗೆ ಬಂದದ್ದೆಂದರೆ ಮರಣೋನ್ಮುಖರಾದವರಿಗೆ ಅಮೃತ ಬಿಂದುವು ದೊರೆತಂತೆಯೇ ಸರಿ! ಈದಿನ ಓರ್ವ ಕ್ಷಾತ್ರರಮಣಿಯ ಪವಿತ್ರತೆಯನ್ನು ಕಾಯ್ದುದ್ದರಿಂದ ಇಂದಿಗೆ ನಿಮ್ಮ ವೀರಬಾಹುಗಳು ಕೃತಾರ್ಥವಾದವು. ನಿಮ್ಮ ವೀರಖಡ್ಗವು ಧನ್ಯವಾಯಿತು. ಕ್ಷಾತ್ರವೀರರಿಗೆ ಇದಕ್ಕಿಂತಲೂ ಹೆಚ್ಚಿನ ಸೌಭಾಗ್ಯವು ಇನ್ನಾವುದಿರುವದು? ನಿಮ್ಮ ಶುಭಾಗಮನದಿಂದ ನನ್ನ ದುಃಖವು ದೂರಾಯಿತು! ರಾಜಪುತ್ರರೇ, ನಾನು ಈಗ ನಮ್ಮ ಮಿಥಿಲಾ ನಗರದಿಂದ ಎಷ್ಟು ದೂರ ಬಂದಿದ್ದೇನೆ? ನಮ್ಮ ಮಿಥಿಲಾನಗರಿಯು ಯಾವ ದಿಕ್ಕಿಗೆ ಆಗುವದು?" ಎಂದು ನುಡಿದಳು.

ರತ್ನಾಕರನು ಮನಸ್ಸಿನಲ್ಲಿ—ಎಷ್ಟು ಸೌಂದರ್ಯಶಾಲಿನಿಯಿವಳು? ಕಂಠ ವೆಷ್ಟು ಮಧುರ! ಅಹಾ! ಇಂಥ ಸ್ತ್ರೀರತ್ನವು ಪ್ರಾಪ್ತವಾದ ಮನುಷ್ಯನು ಧನ್ಯನೇ ಸರಿ! ಈಕೆಯ ಸೌಜನ್ಯವೇನು? ಮಾತಾಡತಕ್ಕ ಪದ್ಧತಿಯಲ್ಲಿ ಎಷ್ಟು ಚಾತುರ್ಯವಿದೆ? ವಿಧಾತನು ಈಕೆಯ ನಿರ್ಮಾಣಕಾರ್ಯದಲ್ಲಿ ತನ್ನ ಬುದ್ಧಿ ವೈಭವವನ್ನೆಲ್ಲ ವೆಚ್ಚಮಾಡಿರುವನೆಂದರೂ ಒಪ್ಪುವ ಹಾಗಿರುವದು. ನನ್ನ ಸುದೈವದಿಂದ ಈಕೆಯು ನನಗೆ ಲಭಿಸಿರುವಳು. ಇವಳ ಸಂಕಟ ವಿಮೋಚನೆ ಯನ್ನು ಮಾಡಿ ಈಕೆಯನ್ನು ಋಣಿಯನ್ನಾಗಿ ಮಾಡಿರುವೆನು. ಇವೆಲ್ಲ ಕಾರಣ ಗಳಿಂದ ಈಕೆಯು ನನ್ನನ್ನೇ ಒರಿಸಿದರೆ ನನ್ನ ಧನ್ಯತೆಯನ್ನೇನು ಹೊಗಳಲಿ? ಇಂದ್ರನ ಪಟ್ಟದರಸಿಯಾದ ಶಚಿಯು ಕೂಡಾ ಈಕೆಯಷ್ಟು ಸೌಂದರ್ಯಶಾಲಿನಿ ಯಿರಲಿಕ್ಕಿಲ್ಲ! ಇರಲಿ; ನೋಡೋಣ; ಭವಿತವ್ಯತೆಯು ಹ್ಯಾಗಿರುವದೆಂಬದನ್ನು! ಎಂದು ಯೋಚಿಸಿ ಪ್ರಕಟವಾಗಿ—ರಾಜನಂದಿನೀ, ಮಿಥಿಲಾನಗರಿಯಿಂದ ನೀನು ಇಂತಿಷ್ಟೇ ದೂರ ಬಂದಿರುವೆಯೆಂದು ಹೇಳಲಿಕ್ಕೆ ಶಕ್ಯವಿಲ್ಲ. ಯಾಕಂದರೆ ಈ ಪ್ರದೇಶಕ್ಕೆ ನಾನು ಅಪರಿಚಿತನು. ಇಂದೇ ಇಲ್ಲಿಗೆ ನಾನು ಬಂದವನು. ನಾನು ಇಲ್ಲಿಗೆ ಯಾಕೆ ಬಂದೆನೆಂಬದನ್ನು ಹಿಂದಿನಿಂದ ಹೇಳುವೆನು. ನಾವು ಸದ್ಯಕ್ಕೆ ಮಿಥಿಲಾನಗರಿಯ ದಕ್ಷಿಣ ದಿಕ್ಕಿನಲ್ಲಿರುವೆವೆಂದು ಮಾತ್ರ ಹೇಳಬಹುದಾಗಿದೆ. ಮಿಥಿಲಾನಗರಿಯು ಎಷ್ಟು ದೂರವಿದ್ದರೇನು? ನನ್ನ ನೀಲಮೇಘಶ್ಯಾಮವು ನಮ್ಮಿಬ್ಬರನ್ನು ಅಲ್ಪಾವಕಾಶದಲ್ಲಿ ಒಯ್ಯಲು ಸಿದ್ಧವಿರುವದು. ರಾಜಪುತ್ರೀ, ಇನ್ನು ಮುಂದಿನ ಉದ್ಯೋಗವೇನು? ಮಧ್ಯಾಹ್ನವಾಯಿತು, ನನ್ನ ಹೊಟ್ಟೆ ಹಸಿದದೆ. ನಿನ್ನ ಹೊಟ್ಟೆಯೂ ಹಸಿದಿರಬಹುದು. ಇಲ್ಲಿ ಎಲ್ಲಿಯಾದರೂ ಸಮೀಪ ದಲ್ಲಿ ಜಲಾಶಯವಿದ್ದರೆ ಸ್ನಾನಮಾಡಿ ಶುಚಿರ್ಭೂತರಾಗೋಣ; ಆ ಮೇಲೆ ಈ ಸುಂದರವನದ ಸೊಬಗನ್ನು ನೋಡುತ್ತ ಮಧುರ ಫಲಗಳನ್ನು ಭಕ್ಷಿಸೋಣ ಎಂದನು.

ರಾಜನಂದಿನಿಯು ಹಸಿವೆ ಬಾಯಾರಿಕೆಗಳಿಂದ ಬಳಲುತ್ತಿದ್ದಳು. ಈ ಕ್ಷಾತ್ರವೀರನ ದರ್ಶನದಿಂದ ಆಕೆಗೆ ಸಂತೋಷವಾಗಿದ್ದರೂ ಅದರಿಂದ ಕ್ಷುಧಾ ಶಮನವಾಗುವದೆಂತು? ಯವನ ರಾಜಪುತ್ರನ ಭಯದಿಂದ ಮಾತ್ರ ಆಕೆಯು ಮುಕ್ತಳಾಗಿದ್ದಳು. ಆಗ ಆಕೆಯು ಮನಸ್ಸಿನಲ್ಲಿ—"ನಾನು ಈ ಪುರುಷನ ಜೊತೆಯಲ್ಲಿ ಫಲಭಕ್ಷಣಕ್ಕಾಗಿ ಹಾಗು ಜಲಪಾನಕ್ಕಾಗಿ ಜಲಾಶಯ ಶೋಧ

ಮಾಡುತ್ತ ಹೋಗಬಹುದಲ್ಲವೇ? ಈತನು ಪರಪುರುಷನಿರಲು ಇವನ ಜೊತೆ ಯಲ್ಲಿ ಅಡ್ಡಾಡುವದೆಂತು? ಇದು ನನ್ನಂಥ ಕುಲ-ವಧುವಿಗೆ ಭೂಷಣಭೂತ ವಾಗಬಹುದೇ? ಛೀ, ನಾನೆಷ್ಟು ಮೂರ್ಖಳು! ನಾನಿನ್ನೂ ಯಾರ ಸ್ತ್ರೀಯೂ ಆಗಿರುವದಿಲ್ಲ. ಮನಸ್ಸಿಗೆ ಬಂದ ಪುರುಷನನ್ನು ಒರಿಸಲಿಕ್ಕೆ ನನಗೆ ಅಧಿಕಾರ ಐದೆ. ಈ ಪುರುಷನು ಕ್ಷಾತ್ರಕುಲೋತ್ಪನ್ನನಿರುವನು, ರಾಜಪುತ್ರನಿರುವನು, ತರುಣನಿರುವನು, ವೀರನಿರುವನು; ಇಷ್ಟೇ ಅಲ್ಲ, ಸಂಕಟ ಸಮಯದಲ್ಲಿ ಬಂದು ನನ್ನನ್ನು ಸಂರಕ್ಷಿಸಿರುವನು, ನನ್ನ ಪತಿಯಾಗಲಿಕ್ಕೆ ಈತನಲ್ಲದೆ ಇನ್ನಾರು ಯೋಗ್ಯರು? ನಿಜವಾಗಿಯೂ ನನ್ನ ಸ್ವಾಮಿಯು ಈ ರಾಜಪುತ್ರನೇ ಆಗಿರು ವನು. ಈತನನ್ನು ನೋಡಿದ ಕೂಡಲೆ ನನ್ನ ಮನಸ್ಸು ಪ್ರಸನ್ನವಾಯಿತು. ನಾನು ಈತನನ್ನು ಬಿಟ್ಟು ಮಿಕ್ಕವರಾರನ್ನೂ ಒರಿಸಲಾರೆನು. ಒಂದು ವೇಳೆ ಈ ರಾಜಪುತ್ರನು ನನ್ನ ಪಾಣಿಗ್ರಹಣಕ್ಕೆ ಸಮ್ಮತಿಸದಿದ್ದರೂ, ನಾನು ಈತನ ದಾಸಿ ಯಾಗಿಯಾದರೂ ಜನ್ಮಸಾರ್ಥಕ ಮಾಡಿಕೊಳ್ಳುವೆನು. ಈತನನ್ನು ನನ್ನ ಮನಸ್ಸು ಪ್ರೀತಿಸಿದ್ದರಿಂದ ಈತನಲ್ಲಿಟ್ಟ ಪ್ರೇಮವನ್ನು ಬೇರೊಂದೆಡೆಯಲ್ಲಿಡಬಹುದೇ? ಛೀ, ಇಂಥ ಅಲ್ಲದ ಸಲ್ಲದ ಕಾರ್ಯವು ಆರ್ಯಮಹಿಳೆಯೂ, ಮಿಥಿಲಾ ರಾಜನಂದಿನಿ ಯೂ ಆದ ನನ್ನಿಂದ ಕಾಲತ್ರಯದಲ್ಲಿಯೂ ಆಗಲಾರದು. ಎಲಾ! ನಾನು ಬರಿಯ ವಿಚಾರದಲ್ಲಿಯೇ ಮಗ್ನಳಾದೆನು. ಬಹಳ ಹೊತ್ತಾಯಿತು. ರಾಜಪುತ್ರನು ಬಹಳ ಹಸಿದಿರುವನು. ಇಲ್ಲಿಂದ ಬೇಗನೆ ಹೊರಡುವದು ಉಚಿತವು. ಇದು ನನ್ನ ಮನಕ್ಕೂ, ಧರ್ಮಕ್ಕೂ ಸಮ್ಮತವಾದದ್ದು" ಎಂದು ಯೋಚಿಸಿ, ಪ್ರಕಟ ವಾಗಿ—ರಾಜಪುತ್ರರೇ, ಈ ಅಡವಿಯಲ್ಲಿ ಜಲಾಶಯವನ್ನು ಹುಡುಕೋಣ ನಡೆ ಯಿರಿ, ಎಂದಳು.

ಪರಸ್ಪರರ ಅನುರಾಗವು ಪರಸ್ಪರರ ಮೇಲೆ ಉಂಟಾಯಿತು. ಆ ಅನು ರಾಗದಲ್ಲಿ ಧರ್ಮವಿರೋಧವುಂಟಾಗಬಾರದೆಂದು ಇಬ್ಬರೂ ಇಚ್ಛಿಸುತ್ತಿದ್ದರು. ರಾಜನಂದಿನಿಯು ನನ್ನ ಪಟ್ಟಮಹಿಷಿಯಾದರೆ ನಾನು ಧನ್ಯನಾಗುವೆನೆಂದು ರಾಜಪುತ್ರನು ಬಯಸುತ್ತಿದ್ದನು. ಈ ರಾಜಪುತ್ರನು ನನಗೆ ಪತಿಯಾದರೆ ನಾನು ಧನ್ಯಳಾಗುವೆನೆಂದು ಆ ರಾಜನಂದಿನಿಯು ಯೋಚಿಸುತ್ತಿದ್ದಳು. ಆದರೆ ಒಬ್ಬರೂ ತಮ್ಮ ಮನೋದಯವನ್ನು ಬಾಯಿಬಿಚ್ಚಿ ಹೇಳುವಂತಿರಲಿಲ್ಲ. ಹಾಗೆ ಹೇಳು ವದು ಶಿಷ್ಟಸಮ್ಮತವೂ ಅಲ್ಲ. ಆದರೆ ತರುಣಸ್ತ್ರೀ-ಪುರುಷರ ಮನೋಭಾವವು

ವಾಣಿಯಿಂದ ಪ್ರಕಟವಾಗದಿದ್ದರೂ ಬೇರೆ ಉಪಾಯಗಳಿಂದ ಪ್ರಕಾಶಿತವಾಗುತ್ತಿರುತ್ತದೆ. ಪ್ರೇಮಪಾಶಬದ್ಧರಾದ ತರುಣ ಸ್ತ್ರೀ-ಪುರುಷರ ಹಾವಭಾವಗಳೂ ಅಂಗವಿಕ್ಷೇಪಾದಿಗಳೂ, ಹುಸಿಲಜ್ಜೆ ಮೊದಲಾದವುಗಳೂ ಅವರ ಪ್ರೇಮಾತಿರೇಕದ ಪರಿಚಯವನ್ನು ಜಗತ್ತಿಗೆ ಮಾಡಿಕೊಡುತ್ತವೆ. ಪ್ರೇಮಪಾಶಾವೃತರಾದ ವ್ಯಕ್ತಿಗಳಿಂದ ಈ ಕೃತಿಗಳು ಸ್ವಾಭಾವಿಕವಾಗಿಯೇ ಆಗುತ್ತಿರುತ್ತವೆ. ಈ ಸೃಷ್ಟಿನಿಯಮಕ್ಕೆ ಮಿಥಿಲಾ ರಾಜನಂದಿನಿಯೂ, ಅವಂತೀನಗರಿಯ ರಾಜಪುತ್ರನೂ ಅಪವಾದ ಸ್ವರೂಪರಾಗುವ ಬಗೆಹೇಗೆ? ಅವರ ಮನಸ್ಸಿನಲ್ಲುಂಟಾದ ಪ್ರೇಮಾದರಗಳು ಅಂಗ-ಪ್ರತ್ಯಂಗಗಳ ಮುಖಾಂತರ ಪ್ರಕಟವಾಗಲಾರಂಭಿಸಿದವು. ಅವರಿಬ್ಬರೂ ಜಲಾಶಯವನ್ನು ಶೋಧಿಸಿ, ಯೋಜಿಸಿದಂತೆ ಸ್ನಾನ-ಫಲಹಾರಗಳಿಂದ ತೃಪ್ತರಾದರು. ಆ ಸುಂದರವಾದ ಅರಣ್ಯವು, ಅರವಿಂದಗಳಿಂದ ತುಂಬಿದ ಆ ವಿಶಾಲವಾದ ಸರೋವರವು, ಮಂದಮಾರುತನಿಂದ ತಂದ ತಂಬೆಲರು ಅವರ ಬಾಹ್ಯಸ್ಥಿತಿಯನ್ನು ವಿಸ್ಮೃತಿಗೊಳಿಸಿದವು. ಅವರು ಅಗಾಧವಾದ ಪ್ರೇಮಪಾಶಬದ್ಧರಾಗಿ, ಮಂದಸ್ಮಿತರಾಗಿ ಸರೋವರದ ತೀರದಲ್ಲಿ ಕುಳಿತಿರಲು, ಪರಸ್ಪರರ ಅನುರಾಗವು ಪರಸ್ಪರರ ಮೇಲೆ ಇರುವದೆಂಬ ಅನುಭವ ಹೊಂದಿದರು! ಆಮೇಲೆ ಅವರು:—ನಮ್ಮಿಬ್ಬರ ಈ ಪ್ರೇಮಪಾಶವು ಉತ್ತರೋತ್ತರ ಅಭಿವೃದ್ಧಿಯಾಗಲೆಂದು ಮನದಲ್ಲಿಯೇ ಕುಲದೇವತೆಯನ್ನು ಪ್ರಾರ್ಥಿಸಿದರು.

---

## ೭ನೆಯ ಪ್ರಕರಣ--ಶೋಧೋಪಕ್ರಮ.

ವಾಚಕರೇ, ರಾಜನಂದಿನಿಯನ್ನೂ, ಅವಂತಿ ರಾಜಪುತ್ರನನ್ನೂ ಅರಣ್ಯದಲ್ಲಿಯೇ ಬಿಟ್ಟು ನಾವು ಮಿಥಿಲಾನಗರಿಗೆ ಹೋಗೋಣ ನಡೆಯಿರಿ. ಮುಸಲ್ಮಾನರು ರಾಜನಂದಿನಿಯನ್ನು ಅಪಹರಿಸಿಕೊಂಡು ಹೋದದ್ದರಿಂದ ಸಿಂಹಕೇತು ರಾಜನು ತಪ್ತನಾಗಿರುವನು. ಅವನ ಬಾಯಿಂದ ಬಿಸಬಿಸಿ ನಿಸ್ವಾಸಗಳು ಹೊರಡಹತ್ತಿರುವವು; ಶತ್ರುಗಳ ಪಾರುಪತ್ಯಕ್ಕೆ ಏನು ಮಾಡಬೇಕೆಂಬ ವಿಚಾರದಲ್ಲಿಯೇ ಅವನು ಮಗ್ನನಾಗಿದ್ದನು ' ಅಷ್ಟರಲ್ಲಿ ಚಂದ್ರಕೇತುವೆಂಬ ದೂತನು ಬಂದು ಮಹಾಪ್ರಭೋ, ರಾಜಪುತ್ರಿಯನ್ನು ಅಪಹರಿಸಿದ ಮುಸಲ್ಮಾನ ಸೈನ್ಯವು ಕಂದಹಾರದ ಕಡೆಗೆ ಒತ್ತರದಿಂದ ಪ್ರಯಾಣ ಬೆಳಿಸಿತು, ಎಂದು ಹೇಳಿದನು.

ಇದನ್ನು ಕೇಳಿದ ಕೂಡಲೇ ಅರಸನಿಗೆ ಹ್ಯಾಗೆಹ್ಯಾಗೋ ಅನಿಸಿತು. ಅವನಿಂದ ಆ ಮಾತುಗಳನ್ನು ಕೇಳುವದಾಗಲಿಲ್ಲ; ಕೂಡಲೇ ಅವನು ಮೂರ್ಛೆಬಂದು ನೆಲಕ್ಕೆ ಬಿದ್ದನು. ಆಗ ಸೇವಕರು ಗಾಬರಿಯಾಗಿ ನೀರುತಂದು ಅರಸನ ನೆತ್ತಿಗೆ ತಟ್ಟಿ, ಗಾಳಿಯನ್ನು ಹಾಕಹತ್ತಿದರು. ಹೀಗೆ ಸೇವಕರ ಶೀತೋಪಚಾರದಿಂದ ಅರಸನಿಗೆ ಸ್ಮೃತಿಬಂದಿತು. ಮಗಳ ವಿಯೋಗದಿಂದ ಅವನ ದುಃಖವು ಒತ್ತರಿಸಿತು. ಅವನು ಕೂಡಿದ ಸೇವಕರೆದುರಿಗೆ:—ನನ್ನ ಮಗಳು ನನ್ನನ್ನು ಬಿಟ್ಟು ಹೋದಳು! ನನ್ನ ಪ್ರೀತಿಯ ಕಮಲೆಯು ಹೆರವರ ಪಾಲಾದಳು! ಅವಳು ಅಲ್ಲಿ ಎಷ್ಟು ಕಷ್ಟಬಡುತ್ತಿರಬಹುದು? ಅಯ್ಯೋ, ನನ್ನ ಮುದ್ದುಮಗಳೇ, ನೀನು ಎಂಥ ದುರವಸ್ಥೆಯನ್ನು ಹೊಂದಬೇಕಾಯಿತಲ್ಲ! ನನ್ನ ಮಗಳನ್ನು ಶತ್ರುಗಳಿಗೆ ಕೊಡುವಷ್ಟು ಹೇಡಿಗಳು ನನ್ನ ಸೈನಿಕರಿದ್ದಾರೆಂದು ನಾನು ಭಾವಿಸಿದ್ದಿಲ್ಲ! ಇರುವ ಒಬ್ಬ ಮಗಳನ್ನು ಕಳೆದುಕೊಂಡೆನು. ಇನ್ನು ನಾನಿದ್ದು ಉಪಯೋಗವೇನು? ಜೀವಿಸಿ ಪ್ರಯೋಜನವೇನು? ಇದೆಲ್ಲ ರಾಜ್ಯವು ಯಾರಿಗೆಬೇಕು? ರಾಜ್ಯೈಶ್ವರ್ಯವು ಎತಕ್ಕೆ ಬೇಕಾಗಿದೆ? ಹಾಯ್! ಹಾಯ್! ಎಂಥ ದುರ್ಧರ ಪ್ರಸಂಗವಿದು! ಸರಿಕರಾದ ರಾಜರಲ್ಲಿ ತಲೆಯೆತ್ತಿ ಮಾತಾಡಲು ಮರ್ಯಾದೆಯಿಲ್ಲದಾಯಿತಲ್ಲ! ಇಂಥ ಅವಮರ್ಯಾದೆಯು ನನ್ನಂಥ ಭೂಪನಿಗೆ ಸಲ್ಲುವದೆ? ನನ್ನ ಕೀರ್ತಿಗೆ ಇಂಥ ಕಲಂಕವು ಸಾಮಾನ್ಯವಾದದ್ದೇ? ನನ್ನಂಥ ಅಧಮನಿದ್ದು ಫಲವೇನು? ಶಿವಶಿವ! ನಾನು ಜೀವಿಸಲಾರೆನು! ಎಂದು ಅನೇಕ ವಿಧವಾಗಿ ದುಃಖಿಸಿದನು.

ಅರಸನನ್ನು ಯಾರು ಸಮಾಧಾನಪಡಿಸಬೇಕು? ಅವನಕೂಡ ಮಾತಾಡುವಷ್ಟು ಧೈರ್ಯವು ಯಾರಿಗಿದೆ? ಇದ್ದರೂ ಇಂಥ ದುಃಖದಾಯಕ ಸಮಯದಲ್ಲಿ ಅವನನ್ನು ಮಾತಾಡಿಸುವ ಧೈರ್ಯವಾರಿಗಾಗಬೇಕು? ಅವನಿಗಾದ ದುಃಖವನ್ನು ಹೇಳಲಾಸಲ್ಲ. ಅವನಿಗೆ ಒಬ್ಬಳೇ ಮಗಳು. ಗಂಡುಮಕ್ಕಳಿಲ್ಲದ್ದರಿಂದ ಇರುವ ಒಬ್ಬ ಮಗಳನ್ನು ಅಕ್ಕರತೆಯಿಂದ ಸಲುಹಿದ್ದನು. ಅವನು ಮಗಳನ್ನು ಬಿಟ್ಟು ಕ್ಷಣವಾದರೂ ಇರುತ್ತಿದ್ದಿಲ್ಲ. ಮಗಳೇ ಮಗನೆಂದು ಭಾವಿಸಿದ್ದನು. ತನ್ನ ರಾಜ್ಯವನ್ನೆಲ್ಲ ಮಗಳಿಗೆ ಕೊಡಬೇಕೆಂದು ಇಚ್ಛಿಸಿದ್ದನು. ಇದಲ್ಲದೆ ಆಗಿನಕಾಲದಲ್ಲಿ ಅವನಂಥ ಶೂರರೂ, ಕೀರ್ತಿಶಾಲಿಗಳೂ ಆದ ರಾಜರು ಮತ್ತೊಬ್ಬರಿದ್ದಿಲ್ಲ; ಇಂಥವನ ಮಗಳನ್ನು ಹೆರವರು ಅಪಹರಿಸಿದ್ದು ಸಾಮಾನ್ಯವಾದ ಅವಮರ್ಯಾದೆಯೇ?

ರಾಜನು ತಾನೇ ಸಮಾಧಾನವನ್ನು ತಂದುಕೊಂಡು ತನ್ನ ರಾಜ್ಯದೊಳಗಿನ ಹುರಿಯಾಳುಗಳನ್ನು ಕೂಡಹಾಕಲು ಅಪ್ಪಣೆ ಮಾಡಿದನು. ಈಗಿನ ಕಾಲದಂತೆ ಆಗಿನ ಜನರು ಶಕ್ತಿಶೂನ್ಯರೂ, ಉತ್ಸಾಹಶೂನ್ಯರೂ ಇದ್ದಿಲ್ಲ. ಭಾರತೀಯರಾದ ನಮಗೆ ಈಗ ಒಂದು ಫಟಾಕಿಯನ್ನು ಹಾರಿಸಬೇಕಾದರೆ ಅಂಜಿಕೆ ಬರುತ್ತದೆ. ಸಣ್ಣಹುಡುಗರು ಧೈರ್ಯದಿಂದ ಹಾರಿಸಹೋದರೂ ಅವರನ್ನು ಬೈದು ಬಿಡಿಸುತ್ತೇವೆ. ಇಂಥ ನಾವು ಯುದ್ಧವೆಂಬ ಶಬ್ದವನ್ನು ಸಹ ಉಚ್ಚರಿಸಲು ಅಂಜುವೆವು. ಇಂಗ್ಲಂಡ ಜರ್ಮನಿಗಳಲ್ಲಿ ಮಹಾಯುದ್ಧವು ನಡೆದಕಾಲಕ್ಕೆ ಸರಕಾರವು ಸೈನ್ಯಭರತಿಯ ಕೆಲಸ ನಡೆಸಿದಾಗ ಹಿಂದುಗಳಾದ ನಮಗೆ ದೊಡ್ಡ ಸಂಕಟವೇ ಬಂದಂತಾಗಿತ್ತು. ಆದರೆ ಇಂಥ ದುಃಸ್ಥಿತಿಯು ಆಗಿನಕಾಲದಲ್ಲಿದ್ದಿಲ್ಲ. ರಾಜನು ಆಮಂತ್ರಣಕೊಡುವದೊಂದೇ ತಡ; ಪ್ರಜೆಗಳು ಹಾ ಹಾ ಅನ್ನುವಷ್ಟರಲ್ಲಿ ಸೈನ್ಯದಲ್ಲಿ ಸೇರಿಕೊಳ್ಳುತ್ತಿದ್ದರು. ಪ್ರಜೆಗಳಲ್ಲಿ ಬಾಹು ಸಾಮರ್ಥ್ಯವು ವಿಶೇಷವಾಗಿದ್ದದರಿಂದ ಅವರಿಗೆ ಯುದ್ಧವೆಂದರೆ ವೈಯು ಉಬ್ಬುತ್ತಿತ್ತು. ಅವರ ಬಾಹುಗಳು ಸ್ಫುರಣ ಹೊಂದುತ್ತಿದ್ದವು.

ಸಿಂಹಕೇತು ರಾಜನ ಆಜ್ಞೆಯ ಮೇರೆಗೆ ಅಲ್ಪ ಕಾಲದಲ್ಲಿಯೇ ಸೈನ್ಯವು ಕೂಡಿತು. ಶತ್ರುಗಳನ್ನು ಪಾರುಪತ್ಯಗೊಳಿಸಲು ತಕ್ಕಷ್ಟು ಸೈನ್ಯ ಕೂಡಿತೆಂದು ತಿಳಿಯಲು, ರಾಜನು ತನ್ನ ಸರದಾರರನ್ನೆಲ್ಲ ಕರೆದು ನುಡಿದನೇನಂದರೆ—"ಅರಿಮರ್ದನ ಸಮರ್ಥರಾದ ಸರದಾರರೇ, ನೀವೆಲ್ಲರು ಜೀವದಿಂದಿರುವಾಗ ನನ್ನ ಪುತ್ರಿಯು ಯವನರ ವಶಳಾದದ್ದು ಅತ್ಯಂತ ಶೋಚನೀಯವು. ನಾವು ಆ ದಿನ ವೈಮರೆತದ್ದರಿಂದ ಇಂಥ ಭಯಂಕರ ದುಃಖವನ್ನು ಹೊಂದಬೇಕಾಯಿತು. ನಾನು ನನ್ನ ಮಗಳ ಮುಖಾವಲೋಕನ ಮಾಡುವವರೆಗೆ ಸಂತೋಷ ಹೊಂದಲಾರೆನು. ಒಂದುವೇಳೆ ಯವನರು ಅವಳನ್ನು ಭ್ರಷ್ಟಗೊಳಿಸಿದ್ದರೆ, ಆಕೆಯು ನನ್ನ ಕಣ್ಣೆದುರಿಗೆ ಅಗ್ನಿಪ್ರವೇಶಮಾಡಿದರೂ ನನಗೆ ಸಂತೋಷವಿರುವದು. ಮಾತ್ರ ಶತ್ರುಗಳ ಮನೆಯಿಂದ ಅವಳನ್ನು ತರಲೇಬೇಕು. ಈ ಕೆಲಸವು ನಿಮ್ಮಿಂದಾಗುತ್ತಿದ್ದರೆ ಹೇಳಿರಿ. ಇಲ್ಲದಿದ್ದರೆ ಮುದುಕನಾದರೂ ನಾನೇ ಸೇನಾಧಿಪತ್ಯವನ್ನು ವಹಿಸಿ ಕಂದಹಾರಕ್ಕೆ ಸಾಗಿಹೋಗುವೆನು. ಹಾಗು ಶತ್ರುಗಳನ್ನು ಸಂಹರಿಸಿ ರಾಜನಂದಿನಿಯನ್ನು ಬಿಡಿಸಿಕೊಂಡು ಬರುವೆನು. ಶತ್ರುಗಳಿಗೆ ಮಕ್ಕಳನ್ನು ಒಪ್ಪಿಸಿ ಕುಳಿತುಕೊಳ್ಳುವದು ಹೇಡಿತನವು. ಇಂಥ ಅಧಮತನವನ್ನು ಭಾರ

ತೇಯರಾದವರು ಇದುವರೆಗೆ ಯಾರೂ ಆಚರಿಸಿರುವದಿಲ್ಲ. ನಿಮ್ಮಲ್ಲಿ ಪೌರುಷ ವಿದ್ದರೆ ಮಾತನಾಡಿರಿ. ನನ್ನಿಂದ ವೀಳ್ಯವನ್ನು ಸ್ವೀಕರಿಸಿರಿ.''

ಈಮೇರೆಗೆ ರಾಜನು ಸೌಮ್ಯವಾಗಿ ಆದರೆ ಸ್ವಲ್ಪ ಸಂತಾಪದಿಂದ ಮಾತ ನಾಡಲು, ಮುಖ್ಯ ಸೇನಾಪತಿಯು ಎದ್ದುನಿಂತು—"ಮಹಾಪ್ರಭೋ, ಈ ಅಚಾತುರ್ಯವು ಹ್ಯಾಗೆ ಆಯಿತೆಂಬದರ ಕಾರಣವು ನಿಮಗೂ ಗೊತ್ತಿರುವದು. ನಾವು ಹೀಗೆ ಅಸಾವಧಾನರಾಗತಕ್ಕದ್ದಿದ್ದಿಲ್ಲ. ನಮ್ಮಿಂದಲೂ ಮಹಾ ಅಪರಾಧ ವಾಗಿದೆ. ಇನ್ನು ನಾವು ರಾಜನಂದಿನಿಯನ್ನು ತಂದ ಹೊರತು ಮಿಥಿಲಾನಗರಿಗೆ ತಿರುಗಿ ಬರುವದಿಲ್ಲ. ಶತ್ರುಗಳನ್ನು ದಂಡಿಸಿ, ರಾಜನಂದಿನಿಯು ಎಲ್ಲಿದ್ದರೂ ತಂದು ಒಪ್ಪಿಸುವೆನು. ಆದಾಗದಿದ್ದರೆ ಸೈನಿಕರಲ್ಲಿ ಒಬ್ಬನೂ ಉಳಿಯದಂತೆ ಕಾದಿ ವೀರಸ್ವರ್ಗವನ್ನು ಹೊಂದುವೆವು. ಕೃಷ್ಣಮುಖವನ್ನು ನಿಮಗೆ ತೋರಿಸ ಲಿಕ್ಕಿಲ್ಲ. ಇದು ನನ್ನ ಸತ್ಯಪ್ರತಿಜ್ಞೆಯೆಂದು ಬಿನ್ನವಿಸಿಕೊಳ್ಳುತ್ತೇನೆ'' ಎಂದು ನುಡಿಯಲು, ಉಳಿದ ಸರದಾರರೂ, ಸೈನಿಕರೂ ಆ ಮಾತಿಗೆ ಒಪ್ಪಿಕೊಂಡರು. ಸೇನಾಪತಿಯು ಹೀಗೆ ಭೀಷ್ಮಪ್ರತಿಜ್ಞೆ ಮಾಡಿದ್ದನ್ನು ನೋಡಿ ರಾಜನಿಗೆ ಸ್ವಲ್ಪ ಸಮಾಧಾನವಾಯಿತು. ಆತನು ಅಂದೇ ಸೇನಾಪತಿಗೆ ವೀಳ್ಯವನ್ನು ಕೊಟ್ಟು ಸೈನ್ಯಸಹಿತವಾಗಿ ಕಂದಹಾರದ ಮೇಲೆ ದಾಳಿಯನ್ನು ಮಾಡಲಿಕ್ಕೆ ಅಪ್ಪಣೆಯನ್ನು ಮಾಡಿದನು.

ಮರುದಿನ ಮಿಥಿಲಾನಗರಿಯಿಂದ ಪ್ರಚಂಡ ಸೈನ್ಯವು ಹೊರಬಿದ್ದಿತು. ಇಂಥ ಸೇನಾಸಮುದ್ರವು ಕಂದಹಾರವನ್ನು ಸಂಪೂರ್ಣವಾಗಿ ಮುಳುಗಿಸಿ ಬಿಡು ವದೋ ಎಂದು ಪ್ರಜೆಗಳಿಗೆ ತೋರಹತ್ತಿತು. ಸೈನಿಕರು ಒಳ್ಳೇ ಉತ್ಸಾಹ ಭರಿತರಾಗಿ ಸಾಗಿದ್ದರು. ಯುದ್ಧೋತ್ಸಾಹಪ್ರದವಾದ ರಣವಾದ್ಯಗಳು ಭೋರ್ಗ ರೆಯಲಾರಂಭಿಸಿದವು. ಅಸಂಖ್ಯ ಆನೆಗಳೂ, ಕುದುರೆಗಳೂ ಸಾಲ್ಗೊಂಡು ಸಾಗಿದವು. ರಾವುತರು ಕುದುರೆಗಳನ್ನೇರಿ ನಡೆದರು. ಕಾಲಾಳುಗಳಿಗಂತೂ ಲೆಕ್ಕವೇ ಇಲ್ಲ. ಈ ಪ್ರಚಂಡವಾದ ಸೈನ್ಯದ ತುಳಿತದಿಂದ ಭೂಮಿಯು ಕಂಪಿ ಸುತ್ತಿರುವದೋ ಎಂಬಂತೆ ಭಾಸವಾಗಹತ್ತಿತು. ಇಂಥ ಸೈನ್ಯವನ್ನು ಚತುರ ನಾದ ಸೇನಾಪತಿಯು ಒಳ್ಳೇ ವ್ಯವಸ್ಥೆಯಿಂದ ಸಾಗಿಸಿಕೊಂಡು ನಡೆದನು. ಸಿಂಹಕೇತುರಾಜನು ಸಾಕಷ್ಟು ಸೈನ್ಯದೊಡನೆ ನಗರವನ್ನು ರಕ್ಷಿಸುವದಕ್ಕಾಗಿ ಮಿಥಿಲೆಯಲ್ಲಿ ಉಳಿದುಕೊಂಡನು.

ಮಿಥಿಲಾ ಸೈನ್ಯವು ಸಾಗಿರುವಾಗ ಹೊರಟ ಕೆಂಧೂಳಿಯು ಗಗನ ಮಂಡಲದಲ್ಲಿ ಚಕ್ರಾಕಾರವಾಗಿ ತಿರುಗುತ್ತ ಎತ್ತರವಾದ ವಿಜಯಸ್ತಂಭದಂತೆ ತೋರುತ್ತಿತ್ತು. ಸೇನಾಪತಿಯು ಸೈನ್ಯದಲ್ಲಿ ಮೂರು ವಿಭಾಗಗಳನ್ನು ಮಾಡಿ ಒಂದೊಂದು ಭಾಗವನ್ನು ಒಂದೊಂದು ಮಾರ್ಗವಾಗಿ ಕಂದಹಾರಕ್ಕೆ ತಲುಪುವಂತೆ ವ್ಯವಸ್ಥೆಗೊಳಿಸಿದ್ದನು. ಪ್ರತಿಯೊಂದು ಭಾಗದಲ್ಲಿಯು ಗುಪ್ತಹೇರರು ಸೈನ್ಯವು ಬೀಡುಬಿಟ್ಟಾಗ ಸುತ್ತಲೂ ಅಡ್ಡಾಡಿ ಮುಸಲ್ಮಾನರ ಸುಳಿವನ್ನು ತಿಳಿದುಕೊಂಡು ಒರಬೇಕೆಂದು ಅಪ್ಪಣೆ ಮಾಡಿದ್ದನು. ಇದರಿಂದ ರಾಜನಂದಿನಿಯ ಶೋಧವು ಬಹುಬೇಗ ಆಗಬಹುದೆಂದು ಆತನು ತರ್ಕಿಸಿದ್ದನು. ಅವನ ತರ್ಕವು ಬಹ್ವಂಶದಿಂದ ನಿಜವಾಗಿತ್ತು. ಯಾಕಂದರೆ ಮುಸಲ್ಮಾನ ಸೈನಿಕರು ಎಷ್ಟು ಒತ್ತಗದಿಂದ ಸಾಗಿದರೂ ಪರ್ವತಶ್ರೇಣಿಗಳಲ್ಲಿರುವ ಕಠಿಣ ಮಾರ್ಗದ ಮೂಲಕ ಬೇಗನೆ ಅವರು ರಾಜಧಾನಿಯನ್ನು ಮುಟ್ಟಲಾರದವರಾಗಿದ್ದರು. ಆಗಿನ ಕಾಲದಲ್ಲಿ ಮೂರೇ ಕಣವೆಯ ಮಾರ್ಗಗಳು ಬಳಿಕೆಯಲ್ಲಿದ್ದವು. ಈ ಮೂರೂಮಾರ್ಗಗಳಿಗೆ ಸೈನ್ಯವನ್ನು ಕಳಿಸಿದರೆ ದಾರಿಯಲ್ಲಿಯೇ ಶತ್ರುಗಳು ಸಿಗಬಹುದಾಗಿತ್ತು.

ಈ ಮೇರೆಗೆ ಸೇನಾಪತಿಯು ರಾಜನಂದಿನಿಯ ಶೋಧಕ್ಕಾಗಿ ತಕ್ಕ ಏರ್ಪಾಡು ಮಾಡಲು ಸೈನ್ಯದ ಮೊದಲನೇ ಬೀಡು ಬಿಟ್ಟಿತು. ಗುಪ್ತಹೇರರು ರಾಜನಂದಿನಿಯ ಶೋಧಕ್ಕಾಗಿ ಸುತ್ತಲೂ ಪಸರಿಸಿದರು.

ಮನುಷ್ಯನು ಯಾವಾಗಲೂ ಮುಂಜಾಗ್ರತೆಯಿಂದಿದ್ದರೆ ಬಹುತರವಾಗಿ ಅನರ್ಥಕ್ಕೊಳಗಾಗಲಾರನು ಆದರೆ ಮೊದಲು ಅಸಾವಧಾನರಾಗಿದ್ದು, ಸಂಕಟ ಬಂದಬಳಿಕಾದರೂ ಬೇಗನೆ ಜಾಗೃತರಾಗುವದು ದುಃಖದಲ್ಲಿ ಸುಖವೆನಿಸುವದು. ಕೆಲಕೆಲವರು ಸಂಕಟ ಬಂದರೂ ತಮ್ಮ ಮೌಢ್ಯತೆಯನ್ನು ಅಥವಾ ಅಸಾವಧತೆಯನ್ನು ಬಿಡುವದಿಲ್ಲ. ಇಂಥವರು ಸೃಷ್ಟಿಯಲ್ಲಿ ಪ್ರಗತಿಯನ್ನು ಹೊಂದುವ ಬಗೆಹೇಗೆ? ಪ್ರಗತಿ ಮಾರ್ಗದಲ್ಲಿ ಎಚ್ಚರಗೇಡಿತನವೆಂಬ ವಿಘ್ನವು ಬಂದರೆ ಅದನ್ನು ಬಿಸುಟುವದು ನಮ್ಮ ಕರ್ತವ್ಯವಲ್ಲವೆ? ಹಾಗೆ ಮಾಡದೆ ಇದ್ದ ಮನುಷ್ಯನು ನಿಶ್ಚಯವಾಗಿಯೂ ರಸಾತಳಕ್ಕೆ ಹೋಗುವನು. ಮಿಥಿಲಾಸೇನಾಪತಿಯು ಮೊದಲು ಅಸಾವಧಾನನಾಗಿದ್ದರೂ ಗಂಡಾಂತರ ಬಂದಕೂಡಲೆ ಒಳ್ಳೇ ಸಾವಧತೆಯನ್ನು ತಾಳಿದನು.

ಪಾಪ! ಆ ಸೇನಾಪತಿಗೆ ರಾಜನಂದಿನಿಯು ಇರುವ ಸ್ಥಳವೇನು ಗೊತ್ತು?

ಅವನೂ ಮನುಷ್ಯನಲ್ಲವೆ? ಆದ್ದರಿಂದಲೇ ಅವನು ಮನುಷ್ಯ ತರ್ಕಕ್ಕನುಸರಿಸಿ, ರಾಜನಂದಿನಿಯನ್ನು ಯವನರು ಕಂದಹಾರಕ್ಕೆ ಒಯ್ದಿರಬಹುದೆಂದು ತಿಳಿದು ಅದೇಮಾರ್ಗವ ಹಿಡಿದು ಸಾಗಿದ್ದನು. ದೈವಲೀಲೆಯ ಅಗಾಧ ಸಾಮರ್ಥ್ಯವನ್ನು ಅವನೇನು ಬಲ್ಲನು? ರಾಜಪುತ್ರಿಯ ಆರ್ತಧ್ವನಿಯನ್ನು ಮಂದಮಾರುತನು ತಂದು ಸೇನಾಪತಿಯ ಕಿವಿಗೊಗೆದಿದ್ದರೆ, ಇಲ್ಲವೆ ಅವಳಿದ್ದ ಸ್ಥಳವು ಇವನಿಗೆ ಗೊತ್ತಾಗಿದ್ದರೆ ಅವನು ನೆಟ್ಟಗೆ ಅವಳಿದ್ದ ಸ್ಥಳಕ್ಕೆ ಹೋಗಿ ಅವಳ ದುಃಖ ಪರಿಹಾರ ಮಾಡುತ್ತಿದ್ದನು. ಪಾಪ! ರಾಜಪುತ್ರಿಯ ದುರ್ದೈವವು! ವಿಧಾತನಾದರೂ ಸೇನಾಪತಿಗೆ ತ್ರಿಕಾಲಜ್ಞಾನವನ್ನು ಕೊಡಲಿಲ್ಲ. ಕೊಟ್ಟಿದ್ದರೆ ಅವನಾದರೂ ಇಷ್ಟೇಕೆ ಕಷ್ಟಬಡುತ್ತಿದ್ದನು?

ರಾಜಪುತ್ರಿಯ ಆರ್ತಧ್ವನಿಯು ಜಗದೀಶನಿಗೆ ಕೇಳಿರಬಹುದು; ಇಲ್ಲವೆ ವೃದ್ಧರಾಜನ ಹೃದಯದ್ರಾವಕಸ್ಥಿತಿಯಿಂದ ಅವನಿಗೆ ಕರುಣೆ ಬಂದಿರಬಹುದು. ಅಥವಾ ಇದು ವರೆಗೆ ಕಷ್ಟಬಟ್ಟ ರಾಜಪುತ್ರ-ರಾಜನಂದಿನಿಯರ ಭಾವೀಸುಖದ ಭಾವನೆಯನ್ನು ದೃಢೀಕರಿಸಲು ಆ ವಿಶ್ವವ್ಯಾಪಿಗೆ ಅನಿಸಿರಬಹುದು. ಆದ್ದರಿಂದಲೇ ಅವನು ಆ ಮಿಥಿಲಾ ಸೈನ್ಯದೊಳಗಿನ ಓರ್ವ ಗುಪ್ತಹೇರನನ್ನು ಬೇರೊಂದು ರೀತಿಯಿಂದ ರಾಜನಂದಿನಿಯ ಶೋಧಕ್ಕಾಗಿ ಪ್ರೇರಿಸಿದನು.

ಆ ಸಮಯದಲ್ಲಿ ಅಜಯಸಿಂಹನೆಂಬ ಗುಪ್ತಹೇರನು ಮನದಲ್ಲಿ—ರಾಜನಂದಿನಿಯನ್ನು ಇದೇ ಮಾರ್ಗದಿಂದ ಒಯ್ದರೆಂದು ನಿಶ್ಚಿತವಾಗಿ ಹೇಳುವದೆಂತು? ಯವನರಿಗೆ ಮತ್ತೇನಾದರೂ ವಿಘ್ನಗಳೊದಗಿ, ಅವರು ರಾಜಪುತ್ರಿಯಿಂದ ವಿರಹಿತರಾಗಿರಬಹುದೆಂದು ಕಲ್ಪಿಸಿದರೆ ಬಾಧಕವೇನು? ದೈವಲೀಲೆಯು ವಿಚಿತ್ರವಿದೆ; ಮಾನವೀಶಕ್ತಿಗೆ ಮೀರಿದ್ದಿದೆ. ನಮ್ಮ ತರ್ಕದಂತೆ ರಾಜನಂದಿನಿಯು ಕಂದಹಾರದಲ್ಲಿ ಸಿಕ್ಕರೆ ಒಳಿತೇ ಆಯಿತು. ಆದರೆ ಅವಳು ಬೇರೆಡೆಯಲ್ಲಿದ್ದರೆ ಕಠಿಣವು. ಆದ್ದರಿಂದ ನಾನು ಕೂಡಲೆ ಇವರ ಮಾರ್ಗವನ್ನು ಬಿಟ್ಟು ಬೇರೆ ರೀತಿಯಿಂದ ಅವಳ ಶೋಧವನ್ನು ಮಾಡುವೆನು. ನಾನೊಬ್ಬನು ಹೋದರೆ ಸೈನ್ಯಕ್ಕೇನೂ ಕೊರತೆಯಾಗುವದಿಲ್ಲ. ಎಂದು ನುಡಿದು, ತನ್ನ ಸಾಹಿತ್ಯಗಳನ್ನೆಲ್ಲ ತೆಗೆದುಕೊಂಡು ಬೇರೆದಿಕ್ಕಿಗೆ ಮಾರ್ಗಕ್ರಮಿಸಹತ್ತಿದನು. ಹೋಗುವಾಗ ಅವನಿಗೆ ಮಾರ್ಗದಲ್ಲಿ ಒದಗಿದ ಸುಚಿಹ್ನಗಳು ಅವನ ಭಾವನೆಯನ್ನು ಬಲಪಡಿಸಿದವು. ಆದ್ದರಿಂದ ಅವನು ಉತ್ಸಾಹದಿಂದ ಮಾರ್ಗಕ್ರಮಿಸುತ್ತ ರಾಜಪುತ್ರಿಯ ಶೋಧವನ್ನು ಯುಕ್ತಿಪ್ರಯುಕ್ತಿಗಳಿಂದ ಮಾಡತೊಡಗಿದನು.

# ೮ನೆಯ ಪ್ರಕರಣ—ಸೇಡುತೀರಿಸುವ ಹವ್ಯಾಸ.

ಅಬ್ದುಲನು ರಹಿಮಾನನ ಅಪ್ಪಣೆಯಂತೆ ತಮ್ಮ ಸೈನಿಕರನ್ನು ಹುಡುಕಲು ಹೋಗಿದ್ದನಷ್ಟೇ; ಅವನು ಸೈನಿಕರನ್ನು ಬಹಳವಾಗಿ ಹುಡುಕಿ ಬೇಸತ್ತನು. ಎಷ್ಟು ಹುಡುಕಿದರೂ ತಮ್ಮ ಸೈನ್ಯದ ಸುಳಿವು ಹತ್ತದ್ದರಿಂದ ಅವನು ನಿರು ತ್ಸಾಹಿಯಾಗಿ ತನ್ನ ಒಡೆಯನ ಕಡೆಗೆ ತಿರುಗಿದನು. ಆದರೆ ಅವನು ಒಡೆಯನಿದ್ದ ಸ್ಥಳಕ್ಕೆ ಬಂದು ನೋಡಲು, ಅಲ್ಲಿ ಯಾರೂ ಇರದೆ ಡೋಲಿಯು ಮಾತ್ರ ಇದ್ದಿತು. ಮತ್ತ ಒಂದು ದೊಡ್ಡ ಸರ್ಪವು ತುಂಡು ತುಂಡಾಗಿ ಬಿದ್ದಿದ್ದು, ಸುತ್ತಲೂ ದುರ್ವಾಸನೆಯಿಡಿಗಿತ್ತು. ತಾನು ಒಂದೆರಡು ದಿನ ತಡಮಾಡಿದ್ದ ರಿಂದ ತನ್ನ ಒಡೆಯನು ಸಿಟ್ಟಾಗಿ ಹೋಗಿರಬಹುದೆಂದು ತರ್ಕಿಸಿದನು; ಆದರೆ ಅವನ ಈ ತರ್ಕವು ಸಮರ್ಪಕವಾಗಿ ತೋರದಾಯಿತು. ಯಾಕಂದರೆ ಅಪಹರಿಸಿ ತಂದ ರಾಜನಂದಿನಿಯನ್ನು ಕರೆದುಕೊಂಡು ಹೋಗುವದು ತನ್ನ ಒಡೆಯನಿಗೆ ಅಶಕ್ಯವಾಗಿತ್ತೆಂಬದನ್ನು ಆತನು ಬಲ್ಲವನಾಗಿದ್ದನು. ಆದ್ದರಿಂದ ಅವನು ಯಾವ ಮಾತನ್ನೂ ನಿರ್ಧರಿಸದೆ ಸುಮ್ಮನೆ ಹುಚ್ಚನಂತೆ ಆ ಅರಣ್ಯದಲ್ಲಿ ಅಡ್ಡಾಡಹತ್ತಿ ದನು. ಆಗ ದೂರದಲ್ಲಿ ಒಂದು ದೇವಾಲಯವು ಕಾಣಿಸಲು, ತನ್ನ ಒಡೆಯನು ಭಾವೀಪತ್ನಿಯೊಡನೆ ಅಲ್ಲಿ ವಾಸಿಸಿ, ತನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರಬಹು ದೆಂದು ತಿಳಿದು, ಅತ್ತಕಡೆಗೆ ಧಾವಿಸಿದನು. ತನ್ನ ಒಡೆಯನು ಸಿಟ್ಟಾಗಿ ತನಗೆ ಏನು ಶಿಕ್ಷೆ ವಿಧಿಸುವನೋ ಎಂದು ಯೋಚಿಸುತ್ತಿದ್ದನು. ಮನುಷ್ಯನಿಗೆ ಪರಾ ಧೀನತೆಯೆಂಬದು ಮಹಾ ದುಃಖಕರವು. ಸ್ವತಂತ್ರ ಮನುಷ್ಯನ ಸೌಖ್ಯವು ಪರಾಧೀನ ಮನುಷ್ಯನಿಗೆ ಬಾರದು. ಪರಾಧೀನನಾದ ಮನುಷ್ಯನ ಐಶ್ವರ್ಯ, ಮಾನ-ಮರ್ಯಾದೆಗಳು ಆತನಿಗೆ ಪ್ರಸಂಗದಲ್ಲಿ ಯಾವ ಸುಖವನ್ನೂ ಕೊಡಲಾರವು. ಇಷ್ಟೇ ಅಲ್ಲ; ಅವನನ್ನು ಬಹು ದುಃಖಕ್ಕೆ ಗುರಿಮಾಡುವವು. ಅಬ್ದುಲನು ದೊಡ್ಡ ಸರದಾರನಾಗಿದ್ದರೂ, ಸೇವ್ಯ-ಸೇವಕ ಭಾವದಿಂದ ರಹಿಮಾನನಿಗೆ ತುಂಬಾ ಅಂಜಬೇಕಾಗಿತ್ತು. ಆವನು ಅಪ್ಪಣೆಮಾಡಿದ ವೇಳೆಗೆ ತನ್ನಿಂದ ಬರು ವದಕ್ಕಾಗದ್ದರಿಂದ ಅವನು ತನ್ನ ಈ ಅಪರಾಧಕ್ಕೆ ಏನು ಶಿಕ್ಷೆಯಾಗುವದೋ ಎಂದು ಅಂಜಬೇಕಾಗಿತ್ತು. ಹೀಗೆ ಅಂಜುತ್ತ ಅವನು ಗುಡಿಯ ಪ್ರದೇಶದಲ್ಲಿ ಕಾಲಿಟ್ಟನು. ಕೂಡಲೆ ಅವನ ಎದೆಯೊಡೆದು ನೀರಾಯಿತು.

ಅಲ್ಲಿ ತನ್ನ ಒಡೆಯನ ದೇಹವು ತುಂಡುತುಂಡಾಗಿ ಬಿದ್ದದ್ದನ್ನು ನೋಡಿದನು. ಆಗ ಅವನ ಕಣ್ಣುಗಳಿಂದ ಅಶ್ರುಗಳು ಧಾರೆಗಟ್ಟಿ ಸುರಿಯಲಾರಂಭಿಸಿದವು. ಆ ಸ್ವಾಮಿನಿಷ್ಠ ಸೇವಕನು ಒಡೆಯನ ಮೃತದೇಹವನ್ನು ಒಟ್ಟುಗೂಡಿಸಿ ಅದರ ಮೇಲೆ ಮನದಣಿ ಅಶ್ರುಗಳನ್ನು ಸುರಿಸಿದನು. ಹಾಯ್! ಹಾಯ್! ರಾಜಪುತ್ರಾ, ಹೆಣ್ಣಿನ ಆಶೆಗೆ ಬಿದ್ದು ಮಣ್ಣುಪಾಲಾದೆಯಾ? ನಿನ್ನ ಅಂತಃಪುರದಲ್ಲಿ ಸುಂದರ ಯುವತಿಯರಿಗೇನು ಕೊರತೆಯಿತ್ತು? ಯಾವ ಪಾಪಿಯು ನಿನಗೆ ಈ ದುರುಪದೇಶವನ್ನು ಮಾಡಿದನೋ ತಿಳಿಯದು! ನಾವು ಸೇವಕರು, ನಿನ್ನ ಮಾತನ್ನು ಕೇಳಬೇಕು, ನಿನ್ನ ಅಪೇಕ್ಷೆಯನ್ನು ಪೂರ್ಣಪಡಿಸಬೇಕೆಂದು ನಿನ್ನೊಡನೆ ಇಲ್ಲಿಗೆ ಬಂದೆವು. ಹಾಯ್! ಖಾನನೇ, ಮರಣಕ್ಕಾಗಿಯೇ ನೀನು ಇಲ್ಲಿಗೆ ಇಷ್ಟು ಉತ್ಸಾಹದಿಂದ ಬಂದಂತಾಯಿತೆ? ಪರಸ್ತ್ರೀ ಹಂಬಲವು ಬಹು ಭಯಂಕರವು; ಅದು ಮನುಷ್ಯರ ಪ್ರಾಣವನ್ನು ಹಿಂಡುವದೆಂಬದು ಸತ್ಯವಾಯಿತು. ಹಾಯ್! ರಾಜಪುತ್ರನೇ, ಎಲ್ಲಿಗೆ ಹೋದೆ? ನಮ್ಮಂಥ ಸೇವಕರನ್ನು ತ್ಯಜಿಸಿ ಎತ್ತ ತೆರಳಿದೆ? ಅಲ್ಲಾ! ಅಲ್ಲಾ!! ಎಂದು ಘೋರವಾಗಿ ಶೋಕಿಸಿದನು. ಆದರೆ ಆ ಅರಣ್ಯದಲ್ಲಿ ಎಷ್ಟು ಶೋಕಿಸಿದರೇನು! ಅವನನ್ನು ಯಾರು ಕೇಳಬೇಕು? ಬಳಿಕ ಅವನು ಸಮಾಧಾನವ ತಾಳಿ ತನ್ನ ಒಡೆಯನನ್ನು ಯಾರು ಕೊಂದಿರಬಹುದೆಂದು ಯೋಚಿಸತೊಡಗಿದನು. ಅವನು ಸೂಕ್ಷ್ಮ ನಿರೀಕ್ಷಣೆಯಿಂದ ತನ್ನ ಒಡೆಯನು ಕ್ರೂರಪ್ರಾಣಿಗಳಿಂದ ಮೃತನಾಗಿರದೆ ಯಾವನೋ ಒಬ್ಬ ವೀರನ ಖಡ್ಗಕ್ಕೆ ಬಲಿಯಾಗಿರುವನೆಂಬದನ್ನು ತಿಳಿದುಕೊಂಡನು. ಅಲ್ಲಿ ಬಹುಜನರ ಹೆಜ್ಜೆಗಳಿರದ್ದರಿಂದ ಬಂದವನು ಒಬ್ಬನೇ ಇರಬೇಕೆಂಬ ಅವನ ತರ್ಕವು ಸರಿಯಾಯಿತು. ಆ ವೀರನು ನಮ್ಮ ರಾಜಪುತ್ರನನ್ನು ಸಂಹರಿಸಿ, ಮಿಥಿಲಾ ರಾಜನಂದಿನಿಯನ್ನು ಅಪಹರಿಸಿರಬೇಕೆಂದು ತರ್ಕಿಸಿದನು. ಈ ತರ್ಕದಿಂದ ಅವನಲ್ಲಿ ಅತ್ಯಂತ ದ್ವೇಷವುಂಟಾಯಿತು. ಯಾವನು ತನ್ನ ಸ್ವಾಮಿಯನ್ನು ಕೊಂದು ರಾಜನಂದಿನಿಯನ್ನು ಅಪಹರಿಸಿರುವನೋ ಅವನನ್ನು ಹುಡುಕಿ ಸೇಡುತೀರಿಸಿಕೊಳ್ಳಬೇಕೆಂಬ ಹವ್ಯಾಸವನ್ನು ತಾಳಿದನು. ಬಳಿಕ ಅವನು ತನ್ನ ಸ್ವಾಮಿಯ ಜಡಶರೀರವನ್ನು ಹೊತ್ತುಕೊಂಡೊಯ್ದು ಅಡವಿಯಲ್ಲಿಯ ಒಂದು ತಗ್ಗಿನಲ್ಲಿ ಮಲಗಿಸಿ ಮೇಲೆ ಮಣ್ಣುಸ್ನೆಳೆದು, ಅದರ ಅಂತ್ಯವಿಧಿಯನ್ನು ನೆರವೇರಿಸಿದನು. ಬಳಿಕ ಅವನು ಅರಣ್ಯದಲ್ಲಿದ್ದ ಸರೋವರದಲ್ಲಿ ಸ್ನಾನಮಾಡಿ ಮಿಥಿಲಾನಗರಿಯು

ರಾಜನಂದಿನಿಯೂ, ಆಕೆಯು ಸಂಗಡಿಗನೂ ಎಲ್ಲಿಗೆ ಹೋಗಿರಬಹುದೆಂದು ಯೋ-ಚಿಸಲಾರಂಭಿಸಿದನು. ಆ ನಿರ್ಮಾನುಷವಾದ ಅರಣ್ಯದಲ್ಲಿ ಮನುಷ್ಯರ ಹೆಜ್ಜೆಗಳು ಕಂಡುಬಂದದ್ದರಿಂದ ಈ ಹೆಜ್ಜೆಗಳು ಅವರವೇ ಇರಬಹುದೆಂದು ತರ್ಕಿಸಿದನು. ಬಳಿಕ ಅವನು ಹೊಟ್ಟೆಗೆ ಹಣ್ಣು ಹಂಪಲಗಳನ್ನು ಸಹ ತಿನ್ನದೆ ತನ್ನ ಸ್ವಾಮಿಯ ಶತ್ರುಗಳನ್ನು ಶೋಧಿಸುವದಕ್ಕಾಗಿ ಹೊರ ಹೊರಟನು. ಅಡವಿಯಲ್ಲಿ ಕಂಡುಬರುವ ಹೆಜ್ಜೆಗಳನ್ನೇ ಅನುಸರಿಸಿ ಅವನು ಸಾಗಿದನು. ಸಂಜೆಯ ಮುಂದೆ ಯಾರೋ ಇಬ್ಬರು ಒಂದು ವೃಕ್ಷದ ಕೆಳಗೆ ಕುಳಿತುಕೊಂಡಂತೆ ಕಂಡಿತು. ಕೂಡಲೇ ಅವನು ಒತ್ತರದಿಂದ ಮುಂದಕ್ಕೆ ಸಾಗಿದನು. ಕುಳಿತವರು ಹೆಚ್ಚು ಸ್ಪಷ್ಟವಾಗಿ ಕಾಣಲಾರಂಭಿಸಿದರು. ಅವರ ಬಳಿಯಲ್ಲಿ ಒಂದು ಕುದುರೆಯಿದ್ದಂತೆ ತೋರಿತು. ಆಗ ಅವರನ್ನು ದಿಟ್ಟಿಸಿ ನೋಡಿದನು. ತನ್ನ ಯಜಮಾನನು ಅಪಹರಿಸಿ ತಂದ ತರುಣಿಯೂ, ಯಾವನೋ ಓರ್ವ ಹಿಂದೂ ತರುಣನೂ ಕೂಡಿ ಕುಳಿತಂತೆ ಕಂಡಿತು. ಆಗ ಅವನಿಗೆ ತನ್ನ ಕೆಲಸವು ಕೈಗೂಡಿತೆಂಬ ಸಂತೋಷವಾಯಿತು. ಆಗ ಅವನು ಅವರ ಸಂಗಡ ಹ್ಯಾಗೆ ಮಾತಾಡಬೇಕೆಂಬದನ್ನು ಗೊತ್ತುಮಾಡಿಕೊಂಡು, ಅವರ ಹತ್ತರ ಹೋದನು. ಬಳಿಕ ಅವನು ಹಿಂದೂ ರಾಜರಿಗೆ ಸಲಾಮು ಮಾಡತಕ್ಕ ಪದ್ಧತಿಯಂತೆ ಸಲಾಮು ಮಾಡಿ ನಿಂತುಕೊಂಡನು

ರಾಜಪುತ್ರನೂ, ಅರಸುಮಗಳೂ ಅಬ್ದುಲನನ್ನು ನೋಡಿದರು. ಬಳಿಕ ರಾಜಪುತ್ರನು ಅಬ್ದುಲನನ್ನು ಕುರಿತು:-"ಸಾಹೇಬ, ನೀವು ಎಲ್ಲಿಯವರು? ಎತ್ತ ಹೊರಟಿರಿ?" ಎಂದು ಕೇಳಿದನು.

ಅಬ್ದುಲ (ಕೃತ್ರಿಮ ಮುಖಭಾವತಾಳಿ):—ನಾನು ಮಿಥಿಲಾನಗರದ ರಾಜದೂತನು. ನಮ್ಮ ಅರಸುಮಗಳನ್ನು ಯಾರೋ ದುಷ್ಟರು ಕದ್ದೊಯ್ದಿರುವದರಿಂದ ಅವರನ್ನು ಹುಡುಕಲಿಕ್ಕೆ ಬಂದಿರುವೆನು, ಎಂದು ಹೇಳಿದನು.

ರಾಜಪುತ್ರ:—ನೀನು ಮಿಥಿಲಾನಗರದ ರಾಜದೂತನೇ? ಹಾಗಾದರೆ ಈ ಸ್ತ್ರೀಯು ಯಾರೆಂಬದು ನಿನಗೆ ಗೊತ್ತುಂಟೊ?

ಅಬ್ದುಲ:—ಓಹೋ! ಗೊತ್ತಿರದೇನು? ಇವರು ನಮ್ಮ ರಾಜಪುತ್ರಿಯರು. ನಮ್ಮ ದೊರೆಯು ಮಗಳನ್ನು ಕಾಣದೆ ನೆಲಕ್ಕೇ ಬಿದ್ದುಬಿಟ್ಟಿರುವನು.

ಅಬ್ದುಲನ ಮೋಸದ ಮಾತುಗಳನ್ನು ಅವರು ನಿಜವೆಂದು ನಂಬಿದರು.

ಆಗ ಅರಸುಮಗನು ನಿರ್ಮಲ ಮನಸ್ಸಿನಿಂದ ತಾನು ಬಂದಬಗೆಯನ್ನೂ, ರಾಜಪುತ್ರಿಯ ಸಂಕಟ ನಿವಾರಣ ಮಾಡಿದ್ದನ್ನೂ, ರಹಿಮಾನನ್ನು ಕೊಂದದ್ದನ್ನೂ ಸಾಗ್ರವಾಗಿ ಹೇಳಿದನು. ಆ ರಾಜಕುಮಾರನಿಗೆ ಅಬ್ದುಲನ ತಕ್ಕವೇಷವು ಗೊತ್ತಾಗಲಿಲ್ಲ.

ಅಬ್ದುಲನ ಸಂಶಯವು ನಿವಾರಣವಾಯಿತು. ನಮ್ಮ ಸ್ವಾಮಿಯನ್ನು ಸಂಹರಿಸಿದ ನೀಚನು ಇವನೇ ಎಂಬದು ಅವನಿಗೆ ನಿರ್ಧಾರವಾಯಿತು. ಹೊತ್ತು ಸಾಧಿಸಿ, ರಾಜಪುತ್ರಿಯನ್ನಪಹರಿಸಬೇಕೆಂದೂ, ಈ ಹಿಂದೂ ವೀರನನ್ನು ಸಂಹರಿಸಬೇಕೆಂದೂ ನಿಶ್ಚಯಿಸಿದನು. ಆದರೆ ಈಶಸಂಕಲ್ಪದ ಮುಂದೆ ಯಾರ ಆಟ ನಡೆಯುವದು?

ರಾಜನಂದಿನಿಗೂ ಇವನ ಪರಿಚಯವಿದ್ದಿಲ್ಲ. ರಹಿಮಾನನು ಇವಳನ್ನು ತೆಗೆದುಕೊಂಡು ಬರುವಾಗ ಅವಳ ಮೈಯಲ್ಲಿ ಎಚ್ಚರವಿದ್ದಿಲ್ಲ. ಆಗ ಅವಳು ಮೂರ್ಛಿತಳಾಗಿದ್ದಳು. ಆದುದರಿಂದ ಅಬ್ದುಲ್ಲನನ್ನು ನೋಡಿದ್ದಿಲ್ಲ. ಇವನು ತನ್ನ ತಂದೆಯ ಸೈನಿಕರಲ್ಲಿ ಒಬ್ಬನಾಗಿರಬಹುದೆಂದು ಭಾವಿಸಿದಳು.

ರಾಜಕುಮಾರನು ಆನಂದಿತನಾದನು. ತನಗೆ ಮಿಥಿಲಾನಗರದ ಮಾರ್ಗವು ಗೊತ್ತಿಲ್ಲದ್ದರಿಂದ ಇವನು ಭೆಟ್ಟಿಯಾದದ್ದು ಒಳಿತಾಯಿತೆಂದು ತಿಳಿದನು. ಅಬ್ದುಲ್ಲನು ಅವರ ಸೇವೆಗೆ ನಿಂತನು ಅವರು ಒತ್ತರದಿಂದ ದಾರೀಕ್ರಮಿಸಿದ್ದರೆ, ಒಂದೇ ದಿನದಲ್ಲಿ ಅವರು ಮಿಥಿಲಾನಗರವನ್ನು ಮುಟ್ಟಬಹುದಾಗಿತ್ತು. ಆದರೆ ಅಬ್ದುಲನು ತನ್ನ ನೀಚ ಉದ್ದೇಶವನ್ನು ಸಾಧಿಸಿಕೊಳ್ಳುವದಕ್ಕಾಗಿ ಅವರನ್ನು ಮಿಥಿಲಾನಗರಿಯ ವಿರುದ್ಧವಾದ ಮಾರ್ಗದಿಂದ ಕರೆದೊಯ್ದನು. ಎರಡು-ಮೂರು ದಿನಗಳ ವರೆಗೆ ದಾರೀ ನಡೆದರೂ ಮಿಥಿಲಾನಗರದ ಸುದ್ದಿಸಹ ಇಲ್ಲ! ರಾಜನಂದಿನಿಯೂ, ರಾಜಪುತ್ರನೂ ಅಚ್ಚರಿಗೊಂಡರು. ಅವರಿಗೆ ಅಬ್ದುಲನು ಏನೇನೋ ಸಮಾಧಾನವ ಹೇಳಿದನು. ಅಬ್ದುಲನು ಮಾತಿನಲ್ಲಿ ಒಳ್ಳೇ ಕುಶಲನಿದ್ದದರಿಂದ ಯಾವ ಬಗೆಯ ಸಂಶಯಕ್ಕೂ ಆಸ್ಪದ ಸಿಗದಂತೆ ವ್ಯವಸ್ಥೆಯನ್ನಿಟ್ಟನು. ಅಬ್ದುಲನ ಮೇಲೆ ರಾಜನಂದಿನಿಯ ಹಾಗು ರಾಜಪುತ್ರನ ವಿಶ್ವಾಸವು ಕೂತಿತು.

ಅಬ್ದುಲನಿಗೆ ಮಾತ್ರ ಮನಸ್ಸಿನಲ್ಲಿ ಸಮಾಧಾನವಿದ್ದಿಲ್ಲೆಂಬದನ್ನು ಹೇಳುವ ಕಾರಣವಿಲ್ಲ. ಅವನು ಸಮಯವನ್ನು ನಿರೀಕ್ಷಿಸುತ್ತಿದ್ದನು. ರಾಜಪುತ್ರನು

ಬಲಿಷ್ಠನಿದ್ದದರಿಂದ ಅವನನ್ನು ಮೋಸದಿಂದಲೇ ಕೊಲ್ಲಬೇಕೆಂದು ಅವನು ನಿಶ್ಚ ಯಿಸಿದ್ದನು. ಆದ್ದರಿಂದ ಅವನು ರಾಜಪುತ್ರಿಯನ್ನು ಅಪಹರಿಸುವದಕ್ಕೂ, ಆ ವೀರನನ್ನು ಕೊಲ್ಲುವದಕ್ಕೂ ಯೋಗ್ಯಸಂಧಿಯನ್ನು ನೋಡುತ್ತಿದ್ದನು. ಅವನ ವೃತ್ತಿಯು ಮೀನವನ್ನು ನುಂಗಲು ಕುಳಿತ ಬಕಪಕ್ಷಿಯನ್ನು ಹೋಲುತ್ತಿತ್ತು.

ಒಂದು ದಿನ ರಾಜಪುತ್ರನು ಹಣ್ಣುಹಂಪಲ ತರಲು ತಾನೇ ಹೋದನು. ಹೋಗುವಾಗ ಅವನು ಅಬ್ದುಲನನ್ನು ಕುರಿತು—"ಅಬ್ದುಲ, ನೀನು ರಾಜ ಪುತ್ರಿಯನ್ನು ರಕ್ಷಿಸುತ್ತಿರು. ನಾನು ಸ್ವಲ್ಪ ಹೊತ್ತಿನಲ್ಲಿಯೇ ಬರುವೆನು. ನಿನಗೆ ನೀಗದ ಪ್ರಸಂಗ ಬಂದರೆ ನನ್ನನ್ನು ಕೂಗು ಕೂಡಲೆ ಬರುವೆನು." ಎಂದು ಹೇಳಿದನು.

ಈ ಸಮಯವನ್ನೇ ನಿರೀಕ್ಷಿಸುತ್ತಿದ್ದ ಅಬ್ದುಲನು ಆನಂದದಿಂದ ಒಪ್ಪಿ ಕೊಂಡನು. ಅರಸುಮಗನು ಕಣ್ಮರೆಯಾದದ್ದನ್ನು ಕಂಡು ಅಬ್ದುಲನು ರಾಜ ಪುತ್ರಿಯನ್ನು ಕುರಿತು—ನೀನು ಆ ರಹಿಮಾನನನ್ನು ಕೊಲ್ಲಿಸಿದೆಯಲ್ಲವೆ? ದುಷ್ಟೇ; ಆ ರಾಜಪುತ್ರನನ್ನು ಮದುವೆಯಾಗಿದ್ದರೆ ನಿನಗೇನು ಕೊರತೆಯಾಗುತ್ತಿತ್ತು? ಇದರಿಂದ ನೀನು ಪಾರಾದೆಯೆಂದು ತಿಳಿಯಬೇಡ. ರಹಿಮಾನನ ಸೇವಕನಾದ ನಾನಿನ್ನೂ ಇರುವೆನು. ಈಗ ನಾನು ನಿನ್ನನ್ನು ಹೊತ್ತುಕೊಂಡೇ ಒಯ್ಯು ವೆನು. ನಿನ್ನ ರಕ್ಷಕನಾದ ಆ ತರುಣನು ಬಿಡಿಸಬಂದರೆ ಅವನನ್ನೂ ಸೈತಾನ ಲೋಕಕ್ಕೆ ಅಟ್ಟುವೆನು! ಎಂದು ನುಡಿದು ಆಕೆಯ ಮೈಮುಟ್ಟ ಹೋದನು. ಆಗ ರಾಜನಂದಿನಿಯು ಅಂಜಿ ಕೆಟ್ಟದನಿಯಿಂದ ಚೀರಿದಳು. ರಾಜಪುತ್ರನು ಸಮೀಪದಲ್ಲಿಯೇ ಇದ್ದನು. ಕೂಡಲೆ ಅವನು ಧಾವಿಸಿ ಬಂದನು. ರಾಜ ಪುತ್ರನು ಬರಲು ಅಬ್ದುಲನು ಮಂಗನಾಗಿ ತಾನು ಅವಸರ ಮಾಡಿದೆನೆಂದು ಪಶ್ಚಾತ್ತಾಪಪಡುತ್ತ ಓಡಿಹೋಗುವ ಯತ್ನದಲ್ಲಿದ್ದನು. ರಾಜಪುತ್ರನಿಗೆ ನಡೆದ ಸಂಗತಿಯು ಗೊತ್ತಾಯಿತು. ಕೂಡಲೆ ಅವನು ಅಬ್ದುಲನನ್ನು ಬಂಧಿಸಿದನು. ಬಳಿಕ ರಾಜನಂದಿನಿಯು—"ಈತನು ಮಹಾನೀಚನು. ಬಹು ಮೋಸಗಾರನು. ಇವನು ನನ್ನ ತಂದೆಯ ಸೇವಕನಲ್ಲ; ಆ ದುಷ್ಟ ರಹಿಮಾನನ ಸೇವಕನು. ನೀವು ಈಗ ಬರದಿದ್ದರೆ ಘಾತವಾಗುತ್ತಿತ್ತು. ಇವನು ಸೇಡು ತೀರಿಸಿಕೊಳ್ಳಲು ನಮ್ಮಲ್ಲಿ ಬಂದಿರುವನು. ಇವನನ್ನು ಈಗಲೇ ಯಮಸದನಕ್ಕಟ್ಟಿರಿ" ಎಂದಳು.

ಅರಸುಮಗನು ಇದನ್ನೆಲ್ಲ ಕೇಳಿದನು. ಅವನಿಗೆ ಅಬ್ದುಲನ ವಿಷಯಕ್ಕೆ ತುಂಬಾ ಸಿಟ್ಟು ಬಂದಿತು. ಅವನು ಅಬ್ದುಲನನ್ನು ಕುರಿತು—"ಎಲೈ ನೀಚನೇ, ನಮ್ಮನ್ನು ಮೋಸಗೊಳಿಸಲು ಬಂದಿರುವೆಯಾ? ನಿಲ್ಲು, ನಿನಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡುತ್ತೇನೆ. ನಿನ್ನ ಒಡೆಯನು ಯಮಲೋಕಕ್ಕೆ ಹೋಗಿರುವನು. ಅದೇ ಲೋಕಕ್ಕೆ ನೀನೂ ಹೋಗುವೆಯಂತೆ, ಎಂದು ನುಡಿದನು. ರಾಜಪುತ್ರನು ಅಬ್ದುಲನ ಕೈಯಲ್ಲಿ ರಹಿಮಾನನ ಖಡ್ಗವನ್ನು ಕೊಟ್ಟು—"ನನ್ನೊಡನೆ ಯುದ್ಧಕ್ಕೆ ಬಾ. ಯುದ್ಧಮುಖದಿಂದ ನಿನ್ನನ್ನು ಕೊಲ್ಲುವೆನು ನಿನ್ನಂಥ ನಿಃಶಸ್ತ್ರನನ್ನು ಕೊಲ್ಲುವದು ಕ್ಷತ್ರಿಯರ ಧರ್ಮವಲ್ಲ" ಎಂದು ನುಡಿದು ಯುದ್ಧಕ್ಕೆ ಅಣಿಯಾದನು. ಅಬ್ದುಲನೂ ರೊಚ್ಚಿನಿಂದ ಆ ವೀರನಮೇಲೆ ಸಾಗಿಹೋದನು. ಇಬ್ಬರಿಗೂ ಕಡುತರವಾದ ಕಾಳಗವೆಸಗಿತು. ಅಬ್ದುಲನೂ ಹೆಸರಾದ ವೀರನಿದ್ದನು. ಆದರೆ ಆ ರಾಜಪುತ್ರನ ಮುಂದೆ ಅವನ ಆಟವು ನಡೆಯದಂತಾಯಿತು. ಇಬ್ಬರೂ ಕೆಲ ಹೊತ್ತಿನವರೆಗೆ ಕಾದಿದ ಬಳಿಕ ರಾಜಪುತ್ರನ ಖಡ್ಗದ ಹೊಡತವು ಅಬ್ದುಲನ ಆಯಕಟ್ಟಿನ ಸ್ಥಳಕ್ಕೆ ಬಿದ್ದದರಿಂದ ಅವನು ಮೂರ್ಛೆಹೊಂದಿ ನೆಲಕ್ಕೆ ಬಿದ್ದುಬಿಟ್ಟನು. ಕಡತವು ಬಲವಾಗಿ ಕೂತದ್ದರಿಂದ ಅಗರಲ್ಲಿ ಅವನ ಅಂತವೇ ಆಗಿಹೋಯಿತು; ರಾಜಪುತ್ರನು ನಿಷ್ಕಂಟಕನಾದನು. ರಾಜನಂದಿನಿಯು ಜೀವದಲ್ಲಿ ಜೀವ ಬಂದಂತಾಯಿತು. ಅಬ್ದುಲ್ಲನಿಗೂ, ರಾಜಪುತ್ರನಿಗೂ ಯುದ್ಧ ನಡೆದಾಗ ಆಕೆಯು ರಾಜಪುತ್ರನಿಗೆ ಜಯವಾಗುವಂತೆ ದೇವರನ್ನು ಪ್ರಾರ್ಥಿಸುತ್ತಿದ್ದಳು.

ಸೇಡುತೀರಿಸಿಕೊಳ್ಳುವ ಹವ್ಯಾಸಕ್ಕೆಬಿದ್ದ ಅಬ್ದುಲನು ತಾನೇ ಮೃತನಾಗಿ ಹೋದನು. ರಾಜಪುತ್ರನಿಗೂ, ರಾಜನಂದಿನಿಗೂ ದೈವಬಲವಿದ್ದದ್ದರಿಂದ ಅವರ ಮೇಲೆ ಒಂದ ಸಂಕಟಗಳು ತಮ್ಮಷ್ಟಕ್ಕೆ ತಾವೇ ನಿವಾರಣವಾಗಹತ್ತಿದವು. ಅವರ ಪೂರ್ವ ಸುಕೃತವು ಅವರಿಗೆ ಒಳ್ಳೇ ಸಹಕಾರಿಯಾಯಿತು.



# ೯ನೆಯ ಪ್ರಕರಣ—ಹೊಸ ಸಂಕಟ.

ನಮ್ಮ ಕಥಾನಕವು ನಡೆದಕಾಲದಲ್ಲಿ ಈಗಿನಷ್ಟು ವ್ಯವಸ್ಥೆ ಇದ್ದಿಲ್ಲ. ದೇಶದಲ್ಲಿ ಅನೇಕ ರಾಜರೂ, ಪಾಳಯಗಾರರೂ, ಜಹಗೀರದಾರರೂ ಬಹಳವಾಗಿದ್ದರು. ಎಲ್ಲರೂ ತಮ್ಮಮ್ಮಷ್ಟಕ್ಕೆ ಸ್ವತಂತ್ರರೇ ಇದ್ದರು. ಒಬ್ಬರ ಹಂಗು ಮತ್ತೊಬ್ಬರಿಗಿದ್ದಿಲ್ಲ. ಯಾವ ರಾಜನಾದರೂ ತಪ್ಪುಮಾಡಿದರೆ, ಅವನನ್ನು ಉಳಿದ ರಾಜರು ನಾಶಗೊಳಿಸಿ, ಅವನ ರಾಜ್ಯವನ್ನು ತಮ್ಮತಮ್ಮೊಳಗೆ ಹಂಚಿಕೊಳ್ಳುತ್ತಿದ್ದರು. ಈಗಿನಂತೆ ಏಕಛತ್ರಾಧಿಪತ್ಯವಿದ್ದಿಲ್ಲ. ಅರಸರು ಬಲಶಾಲಿಗಳಿದ್ದರೂ ಏಕಛತ್ರಾಧಿಪತ್ಯವಿರದ್ದರಿಂದ ಅವರ ದರ್ಪವು ಅಷ್ಟು ನಡೆಯುತ್ತಿದ್ದಿಲ್ಲ. ದೇಶದಲ್ಲೆಲ್ಲ ಬಹುತರ ಅರಣ್ಯವೇ ಇತ್ತು. ದೊಡ್ಡ ದೊಡ್ಡ ಪಟ್ಟಣಗಳಿದ್ದಿಲ್ಲ. ಬಹುನಾಯಕತ್ವದೋಷದಿಂದ ರಾಜ್ಯದಲ್ಲಿ ವ್ಯವಸ್ಥೆಯಿದ್ದಿಲ್ಲ. ಕಳ್ಳ-ಕಾಕರು ದೇಶದಲ್ಲಿ ಹರಡಿಕೊಂಡಿದ್ದರು. ಅವರನ್ನು ಬಂಧಿಸಿ, ಅವರ ಉಪಟಳವನ್ನು ಮುರಿಯುವದು ಆಗಿನ ರಾಜರಿಂದ ಆಗುತ್ತಿದ್ದಿಲ್ಲ. ಆದ್ದರಿಂದ ಕಳ್ಳರ ಟೋಳಿಯು ಬಲಿತು ದೇಶದಲ್ಲೆಲ್ಲ ಕೊಲೆ-ಸುಲಿಗೆಯನ್ನು ಮಾಡುತ್ತಿತ್ತು.

ಒಂದೊಂದು ಟೋಳಿಯಲ್ಲಿ ಸಾವಿರ ಜನರು ಇರುತ್ತಿದ್ದರು. ಅವರು ಸಾಂಕೇತಿಕ ಭಾಷೆಯನ್ನು ಆಡುತ್ತಿದ್ದರು. ಅವರು ತಮಗಿಂತಲೂ ಸಣ್ಣ ಟೋಳಿಗಳ ಕೂಡಾ ಕಾದಿ, ಅವನ್ನು ನಾಶಮಾಡಿ, ಅವುಗಳಲ್ಲಿದ್ದ ಕಳ್ಳರ ದ್ರವ್ಯವನ್ನೆಲ್ಲ ತಾವೇ ಅಪಹರಿಸುತ್ತಿದ್ದರು. ತಮಗೆ ಹತ್ತುವದರ ಸಲುವಾಗಿ ಕುದುರೆಯನ್ನೂ, ಯುದ್ಧ ಮಾಡುವದರ ಸಲುವಾಗಿ ಖಡ್ಗ-ಭಾಲೆ ಮುಂತಾದ ಯುದ್ಧದ ಸಾಮುಗ್ರಿಗಳನ್ನೂ ತೆಗೆದುಕೊಳ್ಳುತ್ತಿದ್ದರು. ತಮ್ಮಲ್ಲಿ ಉತ್ತಮನಾದವನನ್ನು ಆರಿಸಿ, ಅವನನ್ನು ನಾಯಕನನ್ನಾಗಿ ಮಾಡಿಕೊಳ್ಳುತ್ತಿದ್ದರು. ನಾಯಕನು ಹೇಳಿದಂತೆ ಉಳಿದವರು ಕೇಳುತ್ತಿದ್ದರು. ಯಾವನು ಅವರ ವಿರುದ್ಧ ನಿಲ್ಲುವನೋ ಅವನನ್ನು ಕೂಡಲೇ ತುಂಡರಿಸಿ ಹಾಕುತ್ತಿದ್ದರು.

ಕಳ್ಳರ ಟೋಳಿಯು ಮುತ್ತಿದ ಗ್ರಾಮವು ಹಾಳಾಯಿತೆಂತಲೇ ತಿಳಿಯಬೇಕು. ಇವರು ಗ್ರಾಮವನ್ನು ಹೊಕ್ಕು ಕೈಗೆ ಸಿಕ್ಕವರನ್ನು ಕೊಂದು ಹಾಕುತ್ತಿದ್ದರು. ಹಾಗು ಮನೆಗಳನ್ನು ಸುಲಿಗೆ ಮಾಡುತ್ತಿದ್ದರು. ಬಳಿಕ ಊರಿಗೆ

ಊರೇ ಸುಡುವಂತೆ ಕೊಳ್ಳಿ ಇಡುತ್ತಿದ್ದರು. ಹೀಗೆ ಕಳ್ಳರ ಪುಂಡಾಟಿಕೆಯು ರಾಕ್ಷಸೀ ಕೃತ್ಯವನ್ನು ಸ್ಮರಣೆಗೆ ತಂದುಕೊಡುತ್ತಿತ್ತು.

ಈ ಕಳ್ಳರು ಒಂದು ಸ್ಥಳದಲ್ಲಿ ಸ್ಥಿರವಾಗಿ ನಿಲ್ಲುತ್ತಿದ್ದಿಲ್ಲ. ಇಂದು ಮುಂಜಾವಿನಲ್ಲಿ ಒಂದು ಸ್ಥಳದಲ್ಲಿದ್ದರೆ ಸಂಜೆಗೆ ಮತ್ತೊಂದು ಸ್ಥಳದಲ್ಲಿರುತ್ತಿದ್ದರು. ಹೀಗೆ ಮಾಡುತ್ತಿದ್ದದರಿಂದ ರಾಜರಿಗೆ ಅವರನ್ನು ಹಿಡಿಯುವದು ಬಹು ತೊಂದರೆಯ ಕೆಲಸವಾಗಿತ್ತು.

ಕಳ್ಳರು ಯಾವದೊಂದು ಸ್ಥಳವನ್ನು ಸುಲಿಯುವಾಗ ಸೈನ್ಯವಾಗಲಿ, ಜನರಾಗಲಿ ಒಟ್ಟುಗೂಡಿ ಅವರನ್ನು ತಡೆದರೆ ಎಲ್ಲರೂ ಬೇರೆ ಬೇರೆ ಕಡೆಗೆ ಓಡಿ ಹೋಗುತ್ತಿದ್ದರು. ಪುನಃ ಒಂದು ಸಾಂಕೇತಿಕ ಸ್ಥಳದಲ್ಲಿ ಒಟ್ಟುಗೂಡುತ್ತಿದ್ದರು. ಇವರು ಒಂದು ಗಿರಿಯ ಗಂಹರದಲ್ಲಾಗಲಿ, ಗವಿಯಲ್ಲಾಗಲಿ, ಅರಣ್ಯಮಧ್ಯದಲ್ಲಿಯಾಗಲಿ ವಸತಿಯನ್ನು ಮಾಡುತ್ತಿದ್ದರು. ಅಲ್ಲಿ ಎಲ್ಲರೂ ಒಟ್ಟುಗೂಡಿ ತಾವು ಸುಲಿಗೆಯಲ್ಲಿ ತಂದ ದ್ರವ್ಯವನ್ನು ಹಂಚಿಕೊಳ್ಳುತ್ತಿದ್ದರು. ಆ ಹಂಚಿಕೊಂಡ ದ್ರವ್ಯವನ್ನು ಎಲ್ಲಿಯಾದರೂ ಹುಗಿದುಇಡುತ್ತಿದ್ದರು. ಇವರು ಮಳೆಗಾಲವನ್ನು ಬಿಟ್ಟು ಉಳಿದ ಕಾಲದಲ್ಲೆಲ್ಲ ಸುಲಿಗೆಯ ಕೆಲಸವನ್ನು ಮಾಡುತ್ತಿದ್ದರು. ಇರಲಿ.

ಒಂದು ದಿನ ಒಂದು ಟೋಳಿಯು ಕೊಲೆ-ಸುಲಿಗೆ ಮಾಡಲಿಕ್ಕೆ ಹೊರಟಿತು. ಅದು ಕೊಲೆ-ಸುಲಿಗೆ ಮಾಡಿಕೊಂಡು ತಿರುಗಿ ಬರುವಾಗ ದಾರಿಯಲ್ಲಿ ನಮ್ಮ ರಾಜಪುತ್ರ ರಾಜನಂದಿನಿಯರು ಇಳಿದುಕೊಂಡ ಗುಡಿಯು ಹತ್ತಿತು. ಅವರು ಗುಡಿಯಲ್ಲಿ ಮನುಷ್ಯರಿದ್ದದ್ದನ್ನು ಕಂಡರು. ಬಳಿಕ ಕೇಳುವದೇನು? ಕಳ್ಳರು ಗುಡಿಯನ್ನು ಮುತ್ತಿದರು. ರಾಜಕುಮಾರನು ಸಂತಾಪದಿಂದ ಅವರೊಡನೆ ಯುದ್ಧಮಾಡಲಾರಂಭಿಸಿದನು. ಕಳ್ಳರಿಗೆ ರಾಜಪುತ್ರನಷ್ಟು ಶೌರ್ಯವು ಎಲ್ಲಿಂದ ಬರಬೇಕು? ಒಬ್ಬೊಬ್ಬರೇ ಅವನ ಖಡ್ಗಕ್ಕೆ ಬಲಿಯಾಗ ತೊಡಗಿದರು.

ಹೀಗೆ ರಾಜಪುತ್ರನು ಅಸಂಖ್ಯಜನ ಕಳ್ಳರೊಡನೆ ಯುದ್ಧ ಮಾಡುತ್ತಿರಲು, ಕಳ್ಳರ ನಾಯಕನು ಗುಡಿಯನ್ನು ಪ್ರವೇಶಿಸಿದನು. ಆಗ ಆವನ ದೃಷ್ಟಿಗೆ ರಾಜನಂದಿನಿಯು ಬಿದ್ದಳು. ರಾಜಕನ್ನಿಕೆಯೂ, ಪರಮ ಸುಂದರಿಯೂ, ತರುಣೆಯೂ ಆದ ಅವಳನ್ನು ಕಂಡಕೂಡಲೆ ಆ ನಾಯಕನಲ್ಲಿ ಪಾಪ ವಾಸನೆಯು ಉತ್ಪನ್ನವಾಯಿತು. ಸುಂದರ ಸ್ತ್ರೀಯ ದರ್ಶನದಿಂದ ತಪಸ್ವಿಗಳ ಮತಿಯೇ ಭ್ರಷ್ಟ

ವಾಗುತ್ತಿರಲು, ನೀಚಕರ್ಮರತನಾದ ನಾಯಕನ ಪಾಡೇನು? ಸ್ತ್ರೀ ವಿಷಯವೇ ಅಷ್ಟೊಂದು ಮೋಹಕವಿರುತ್ತದೆ. ಬ್ರಹ್ಮನು ಸ್ತ್ರೀಜಾತಿಯೊಂದನ್ನು ನಿರ್ಮಿಸ ದಿದ್ದರೆ ಜಗತ್ತಿನಲ್ಲಿ ಈಗಾಗುತ್ತಿರುವ ಅನರ್ಥಗಳಲ್ಲಿ ಶತಾಂಶದಷ್ಟಾದರೂ ಅನರ್ಥ ಗಳು ಉಂಟಾಗುತ್ತಿದ್ದವೋ ಇಲ್ಲವೋ ಎಂಬದನ್ನು ಹೇಳಲಿಕ್ಕಾಗದು. ಐತಿ ಹಾಸಿಕ ಕಾಲದಲ್ಲಾಗಲಿ, ಪೌರಾಣಿಕ ಕಾಲದಲ್ಲಾಗಲಿ ಸ್ತ್ರೀಮೂಲಕ ಆದಷ್ಟು ಅನರ್ಥಗಳು ಇನ್ನೇತರಿಂದಲೂ ಆಗಿಲ್ಲವೆಂದು ಹೇಳಬಹುದು. ಸ್ತ್ರೀಯು ಜಗ ದುತ್ಪತ್ತಿಗೆ ಕಾರಣಳಿದ್ದಂತೆ ಸರ್ವ ಅನರ್ಥಗಳಿಗೂ ಮೂಲ ಕಾರಣಳಿರುತ್ತಾ ಳೆಂದರೆ ತಪ್ಪಾಗಲಿಕ್ಕಿಲ್ಲ. ಇರಲಿ.

ನಾಯಕನು ರಾಜನಂದಿನಿಯ ರೂಪ-ಲಾವಣ್ಯಗಳಿಗೆ ಮೋಹಿಸಿದನು. ಆಕೆಯನ್ನು ಅಪಹರಿಸಬೇಕೆಂಬ ದುರ್ಬುದ್ಧಿಯು ಅವನಿಗೆ ಉತ್ಪನ್ನವಾಯಿತು. ರಾಜಪುತ್ರನು ಒಬ್ಬನೇ ಸಾವಿರಾರು ಜನ ಕಳ್ಳರ ಮಧ್ಯದಲ್ಲಿ ಬಡಿದಾಡುತ್ತಿರಲು ನಾಯಕನು ನಿರಾಶ್ರಿತಳಾದ ರಾಜ-ನಂದಿನಿಯನ್ನು ಸುಲಭವಾಗಿ ಅಪಹರಿಸಿದನು. ಅವನು ತಾನು ಕುಳಿತುಕೊಳ್ಳುವ ಡೋಲಿಯನ್ನು ತರಿಸಿ, ಅದರಲ್ಲಿ ರಾಜನಂದಿನಿ ಯನ್ನು ಬಲಾತ್ಕಾರವಾಗಿ ಮಲಗಿಸಿದನು. ನಡೆದ ಪರಿಸ್ಥಿತಿಯನ್ನು ನೋಡಿ ಅವಳು ಹೌಹಾರಿ ಹೋಗಿದ್ದಳು. ನಾಯಕನು ತನ್ನನ್ನು ಮುಟ್ಟಿದ ಕೂಡಲೆ ಆಕೆಯು ಕೆಟ್ಟ ದನಿಯಿಂದ ಚೀರಿದಳು. ಆಕೆಯ ಆರ್ತಧ್ವನಿಯು ರಾಜಪುತ್ರನಿಗೆ ಕೇಳಿಸಿತು. ಆದರೆ ಸಾವಿರಾರು ಜನ ಶತ್ರುಗಳನ್ನು ಸಂಹರಿಸಿದ ಹೊರತು ಅವನು ಆಕೆಯನ್ನು ಬಿಡಿಸಲಿಕ್ಕೆ ಹೋಗುವ ಹಾಗಿದ್ದಿಲ್ಲ. ದೂರದಲ್ಲಿಯೇ ಮನ ದಲ್ಲಿ ಕುದಿಯುತ್ತ ಒಳ್ಳೇ ರೊಚ್ಚಿನಿಂದ ಕಳ್ಳರನ್ನು ಸಂಹರಿಸಲಾರಂಭಿಸಿದನು.

ಇತ್ತ ನಾಯಕನು ನಿರಾತಂಕವಾಗಿ ಡೋಲಿಯನ್ನು ಸಾಗಿಸಿಕೊಂಡು ಓಡಿಹೋದನು. ಕಳ್ಳರು ಕೆಲಹೊತ್ತಿನವರೆಗೆ ರಾಜಪುತ್ರನೊಡನೆ ಬಡಿದಾಡಿದರು; ಆದರೆ ಈ ವೀರನ ಮುಂದೆ ತಮ್ಮ ಆಟವು ನಡೆಯದೆಂದು ತಿಳಿದ ಕೂಡಲೆ ಅವರು ಚದರಿ ದಾರಿಸಿಕ್ಕತ್ತ ಓಡಿಹೋದರು. ರಾಜಪುತ್ರನು ಅವರನ್ನು ಬೆನ್ನಟ್ಟಿ ಕೈಗೆ ಸಿಕ್ಕವರನ್ನು ಸಂಹರಿಸಿ ಕಳ್ಳರೊಬ್ಬರೂ ಸಿಗದಂತೆ ಆದಬಳಿಕ ತಿರುಗಿ ಗುಡಿಗೆ ಬಂದನು. ಆದರೆ ಅಲ್ಲಿ ರಾಜನಂದಿನಿಯಿರದ್ದರಿಂದ ಅವನ ಎದೆಯು ಧಸ್ಸೆಂದಿತು. ತಾನು ಕಳ್ಳರೊಡನೆ ಕಾದುತ್ತಿರುವಾಗ ಕೆಲಜನ ದುಷ್ಟರು ರಾಜ ನಂದಿನಿಯನ್ನು ಅಪಹರಿಸಿರುವರೆಂದು ತಿಳಿದು ಬಹಳ ಖೇದಗೊಂಡನು. ವಿಜಯು

ದಿಂದುಂಟಾದ ಸಂತೋಷವೆಲ್ಲ ಮಾಯವಾಗಿ ಹೋಯಿತು. ಅವನ ಹೃದಯವು ದಹಿಸಲಾರಂಭಿಸಿತು. ಇನ್ನು ಏನು ಮಾಡಬೇಕೆಂದು ಯೋಚಿಸಹತ್ತಿದನು. ಬಳಿಕ ಅವನು ಧೈರ್ಯವ ತಂದುಕೊಂಡು ಕಳ್ಳರ ಗುಪ್ತಸ್ಥಳವನ್ನು ಶೋಧಿಸಿ, ರಾಜನಂದಿನಿಯನ್ನು ಬಿಡಿಸಲೇಬೇಕೆಂದು ನಿಶ್ಚಯಿಸಿದನು. ನಿಶ್ಚಯಿಸಿದ್ದೊಂದೇ ತಡ. ಅವನು ಕೂಡಲೇ ಬಹುಜನ ಕಳ್ಳರು ಓಡಿಹೋದ ದಿಕ್ಕನ್ನು ಹಿಡಿದು ಹೊರಟುಬಿಟ್ಟನು. ಅಹಾ! ರಾಜಪುತ್ರನೇ ನೀನೇ ನಿಜವಾದ ಕ್ಷಾತ್ರವೀರನಲ್ಲವೆ?

ಇತ್ತ ಕಳ್ಳರ ನಾಯಕನ ಸೆರೆಯಲ್ಲಿ ಸಿಕ್ಕ ರಾಜನಂದಿನಿಯು ಡೋಲಿಯಲ್ಲಿಯೇ ಬಿದ್ದುಕೊಂಡು ಮರಣಪ್ರಾಯವಾದ ವೇದನೆಯನ್ನು ಅನುಭವಿಸತೊಡಗಿದಳು. ತನ್ನನ್ನು ಅಪಹರಿಸಿದವರು ಯಾರೆಂಬದು ಆಕೆಗೆ ತಿಳಿಯದಾಯಿತು. ಮತ್ತೆ ಯವನ ಸೈನ್ಯವು ಮರಳಿ ಬಂದು ತನ್ನನ್ನು ಅಪಹರಿಸಿತೋ ಎಂದು ಚಿಂತಿಸತೊಡಗಿದಳು. ಆಕೆಯು ತನ್ನ ದುರ್ದೈವವನ್ನು ಬಹಳವಾಗಿ ಹಳಿದುಕೊಳ್ಳಲಾರಂಭಿಸಿದಳು. ತನಗೆ ಇಷ್ಟೊಂದು ಸುಂದರ ರೂಪವನ್ನಾದರೂ ದೇವರು ಯಾಕೆ ಕೊಟ್ಟಿರುವನೆಂದು ದೇವರಿಗೂ ದೂಷಣೆ ಕೊಡಲಾರಂಭಿಸಿದಳು. ಹೀಗೆ ಆಕೆಯು ದುಃಖಸಾಗರದಲ್ಲಿ ಮುಣುಮುಣುಗಿ ಏಳುತ್ತಿರಲು ಕಳ್ಳರನಾಯಕನು ಆಕೆಯನ್ನು ಸುರಕ್ಷಿತವಾಗಿ ಒಂದು ಗುಹೆಗೆ ಒಯ್ದನು. ಆ ಗುಹೆಯು ಅರಣ್ಯ ಮಧ್ಯದಲ್ಲಿತ್ತು. ಅದು ವಿಶಾಲವೂ, ಭಯಾನಕವೂ ಆಗಿತ್ತು. ಇಂಥ ಆ ಗುಹೆಯು ಆ ನಾಯಕನ ಗುಪ್ತಪ್ರದೇಶವಾಗಿತ್ತು. ಅವನು ಆ ಗುಹೆಯಲ್ಲಿ ತನ್ನ ಪಾಲಿನ ಸುಂದರವಸ್ತುಗಳನ್ನಿರಿಸುತ್ತಿದ್ದನು. ಅದರಂತೆ ಅವನು ರಾಜನಂದಿನಿಯನ್ನೂ ಅಲ್ಲಿರಿಸಿದನು. ತಾನು ಇಲ್ಲಿಯೇ ಇದ್ದರೆ ಆ ಕ್ಷಾತ್ರವೀರನು ಶೋಧಿಸುತ್ತ ಬಂದು ಅನರ್ಥವನ್ನುಂಟುಮಾಡಬಹುದೆಂದು ಯೋಚಿಸಿದನು. ಈ ಯೋಚನೆಯಿಂದ ಅವನು ಗುಹೆಯ ಬಾಗಿಲವನ್ನು ಮೊದಲಿನಂತೆ ಮುಚ್ಚಿ, ಸೇವಕರೊಡನೆ ಅಲ್ಲಿಂದ ಪಲಾಯನ ಹೇಳಿಸಿದನು. ರಾಜನಂದಿನಿಯು ಆ ಗಾಢಾಂಧಃಕಾರವುಳ್ಳ ಗುಹೆಯಲ್ಲಿ ಬಿದ್ದುಕೊಂಡಳು. ಇನ್ನು ಈ ಹೊಸ ಸಂಕಟದಿಂದ ಯಾವ ಅನರ್ಥವುಂಟಾಗುವದೋ ಎಂದು ಅವಳು ಚಿಂತಿಸಲಾರಂಭಿಸಿದಳು.



# ೧೦ನೆಯ ಪ್ರಕರಣ—ಅಜ್ಞಾತವಾಸ.

ಪ್ರಿಯ ವಾಚಕರೇ, ಮನುಷ್ಯನು ತಾನೊಂದು ಮಾಡಿದರೆ ದೈವವೊಂದು ಬಗೆಯುವದು. ಮನುಷ್ಯನು ಕೇವಲ ಪರಾಧೀನನು. ಯಾವದನ್ನು ಮಾಡಲಿಕ್ಕೂ ಅವನಿಗೆ ಸಾಮರ್ಥ್ಯವಿಲ್ಲ, ದೈವಚಕ್ರವು ಹೊರಳಿದಂತೆ ಅವನು ಹೊರಳಬೇಕಾಗುವದು. ಸುಖ-ದುಃಖಗಳು ದೈವವನ್ನವಲಂಬಿಸಿದ್ದರೂ ಮನುಷ್ಯನು ಕೈಮುಚ್ಚಿಕೂಡ್ರುವಂತಿಲ್ಲ. ಕೆಲಸಮಾಡಿ ಸಿದ್ಧಿಯನ್ನು ಪಡೆದೇನೆಂಬ ಭರವಸೆಯೂ ಮನುಷ್ಯನಿಗಿಲ್ಲ. ಕೆಲಸಮಾಡದೆ ಸುಮ್ಮನೆ ಕುಳಿತು ಫಲಹೊಂ-ದುತ್ತೇನೆಂದರೂ ಆಗುವಂತಿಲ್ಲ. ಸೃಷ್ಟಿಕರ್ತನು ಇಂಥ ಚಮತ್ಕಾರಿಕ ಸ್ಥಿತಿಯನ್ನು ಮನುಷ್ಯನಿಗೆ ಕೊಟ್ಟಿರುವನು. ಇದರಲ್ಲಿ ಮನುಷ್ಯನು ಕರ್ಮಫಲದ ಆಶೆಯಿಲ್ಲದೇ ದುಡಿಯಬೇಕೆಂದು ಭಗವಂತನ ಆಶಯವಿದ್ದಂತೆ ತೋರುತ್ತದೆ. ಮನುಷ್ಯನು ಕರ್ತವ್ಯವನ್ನು ಸದಾ ಮಾಡಬೇಕು; ಅದನ್ನು ಅವನು ಸರ್ವಥಾ ಉದಾಸೀನಮಾಡುವಂತಿಲ್ಲ; ಮಾತ್ರ ಫಲಾಪೇಕ್ಷೆ ಹಿಡಿಯಕೂಡದು. ಫಲದಾತೃವು ದೈವವಾಗಿರುವದು. ಇದನ್ನು ಅವಂತೀ ರಾಜಪುತ್ರನು ಬಲ್ಲವನಾಗಿದ್ದನು. ಕರ್ತವ್ಯದ ರಹಸ್ಯವು ಆತನಿಗೆ ಚನ್ನಾಗಿ ಅವಗತವಾಗಿತ್ತು. ಆದ್ದರಿಂದ ಅವನು ಒದಗಿದ ಪ್ರಸಂಗದಿಂದ ಹತಾಶನಾಗಲಿಲ್ಲ. ರಾಜನಂದಿನಿಯು ಕಳ್ಳರ ಕೈಗೆ ಸಿಕ್ಕದ್ದರಿಂದ ಅವಳ ಆಶೆಯನ್ನು ತ್ಯಜಿಸುವದು ವಿಹಿತವೆಂದು ಭಾವಿಸಲಿಲ್ಲ. ತಾನು ಒಮ್ಮೆ ಆಕೆಗೆ ವಚನ ಕೊಟ್ಟದ್ದರಿಂದ ತನ್ನ ದೇಹದಲ್ಲಿ ಪ್ರಾಣವಿರುವವರೆಗೂ ತಾನು ಆಕೆಯ ಸಂರಕ್ಷಣೆಗಾಗಿ ಯತ್ನಮಾಡದಿರುವದು ಸ್ತ್ರೀ ದ್ರೋಹವೆಂದು ಬಗೆದನು. ಒಂದು ವೇಳೆ ಆಕೆಯು ನನ್ನ ದೇಹಾಂತವಾಗುವವರೆಗೂ ಸಿಗದಿದ್ದರೆ ಅದರಲ್ಲಿ ನನ್ನ ದೋಷವೇನು? ಈ ವಚನದ ಮುಂದೆ ನನಗೆ ರಾಜ್ಯವು ತುಚ್ಛವು; ದೇಹವು ಕೂಡಾ ತುಚ್ಛವು. ವಚನ ಕೊಟ್ಟ ತಪ್ಪಿಗೆ ನಾನು ಆ ಸ್ತ್ರೀಯನ್ನು ಶೋಧಿಸಿ ಸಂರಕ್ಷಿಸಲೇ ಬೇಕು, ಎಂದು ನಿರ್ಧರಿಸಿದನು.

ನಿಜವಾಗಿ ವಿಚಾರ ಮಾಡಿದರೆ ರಾಜಪುತ್ರನ ಈ ವಿಚಾರ ಸರಣಿಯು ಅತ್ಯಂತ ಶ್ಲಾಘನೀಯವಾಗಿರುತ್ತದೆ. ಮನುಷ್ಯನು ತನ್ನ ವಚನವನ್ನು ತಾನು ಪಾಲಿಸದಿದ್ದರೆ ಅವನಿಗೆ ಮನುಷ್ಯರಾಗಲಿ, ದೇವರಾಗಲಿ ಹೇಗೆ ಬೆಲೆಗೊಡಬೇಕು?

ವಚನಭ್ರಷ್ಟರು ಮಹಾ ಮೋಸಗಾರರಲ್ಲಿ ಗಣಿಸಲ್ಪಡುವರು. ಆದರೆ ರತ್ನಾಕರನು ಸುವಿಚಾರಿಯಾದ್ದರಿಂದ ಇಂಥ ದುರ್ಬಲವಿಚಾರವನ್ನು ಮನಸ್ಸಿನಲ್ಲಿ ತರಲಿಲ್ಲ. ಆರುತಿಂಗಳ ಅವಧಿಯು ಮುಗಿಯುತ್ತಾ ಬಂದದ್ದರಿಂದ ಬೇಗನೆ ರಾಜಧಾನಿಗೆ ಹೋಗಿ ಸುಖಿಸಬೇಕೆಂದು ಮನಸ್ಸು ಮಾಡಲಿಲ್ಲ. ರಾಜನಂದಿನಿಗೆ ಕೊಟ್ಟ ವಚನಕ್ಕಿಂತ ಯಾವವೂ ಅವನಿಗೆ ಮಹತ್ವದವಾಗಿ ತೋರಲಿಲ್ಲ. ಎಲ್ಲ ರಾಜೈಶ್ವರ್ಯವನ್ನು ಮರೆತು ರಾಜನಂದಿನಿಯ ಶೋಧಕ್ಕಾಗಿ ತಿರುಗಹತ್ತಿದ್ದೆಂದರೆ ಅವನ ಕರ್ತವ್ಯಬುದ್ಧಿಯು ಪ್ರಶಂಸನೀಯವಾದದ್ದೇ ಸರಿ! ಇರಲಿ.

ರಾಜಪುತ್ರನು ಅಡವಡವಿ ತಿರುಗಲಾರಂಭಿಸಿದನು. ಕಳ್ಳರು ನಾಲ್ಕೂ ದಿಕ್ಕುಗಳಲ್ಲಿಯೂ ಓಡಿ ಹೋದದ್ದರಿಂದ ಅವರು ಇಂಥಲ್ಲಿಗೇ ರಾಜನಂದಿನಿಯನ್ನು ಒಯ್ದಿರಬೇಕೆಂಬ ನಿಶ್ಚಿತವು ಆಗದಾಯಿತು. ಆ ನಿರ್ಜನ ಪ್ರದೇಶದಲ್ಲಿ ಅವನನ್ನು ಯಾರು ಕೇಳಬೇಕು? ಒಂದು ದಿನವಾಯಿತು, ಎರಡು ದಿನಗಳಾದವು. ಹೀಗೆಯೇ ಒಂದರ ಹಿಂದೊಂದು ದಿನವು ಕ್ರಮಿಸತೊಡಗಿತು. ಆದರೂ ರಾಜನಂದಿನಿಯ ಸುಳಿವು ಅವನಿಗೆ ಸ್ವಲ್ಪಮಾತ್ರಕ್ಕೂ ಹತ್ತಲಿಲ್ಲ. ಕಳ್ಳರ ಗುಂಪೂ ಸಿಕ್ಕಲಿಲ್ಲ. ಒಂದೊಂದು ದಿಕ್ಕಿನಲ್ಲಿ ೮-೧೦ ಮೈಲುಗಳ ವರೆಗೆ ಹೋದರೂ ಅದರಿಂದ ಪ್ರಯೋಜನವಾಗಲಿಲ್ಲ. ರತ್ನಾಕರನು ಎಷ್ಟು ಉತ್ಸಾಹೀಪುರುಷನಾದರೂ ಕಂಗೆಟ್ಟನು. ಆದರೂ ಅವನು ಪುನಃ ಧೈರ್ಯವ ತಂದುಕೊಂಡು ಶೋಧಕ್ಕಾರಂಭಿಸಿದನು.

ಈ ಮೇರೆಗೆ ರತ್ನಾಕರನು ಅಡವಡವಿ ತಿರುಗಿ ಕಷ್ಟಬಡುತ್ತಿರಲು, ಇತ್ತ ಗುಹೆಯಲ್ಲಿ ರಾಜನಂದಿನಿಯು ಸಾವಿರಾರು ಚೇಳು ಕಡಿದಷ್ಟು ವ್ಯಥೆಯನ್ನನುಭವಿಸುತ್ತಿದ್ದಳು. ಅವಳು ಒಂದೆರಡು ದಿನಗಳನ್ನು ಆ ಗುಹೆಯಲ್ಲಿ ಕಳೆದಳು. ಈ ಅವಧಿಯಲ್ಲಿ ಆಕೆಯು ತಾನು ಬಿದ್ದುಕೊಂಡ ಸ್ಥಳಬಿಟ್ಟು ಸಹ ಚಲಿಸಲಿಲ್ಲ. ಅನಿವಾರವಾದ ದುಃಖದಿಂದ ಬಳಲಿದವಳಾದ್ದರಿಂದ ಅವಳಿಗೆ ಜನ್ಮವೇ ಬೇಡಾಗಿ ಹೋಗಿತ್ತು. ಎರಡು ದಿನಗಳ ಮೇಲೆ ಆಕೆಯು ಎದ್ದು ಕುಳಿತು ಸುತ್ತಲೂ ನೋಡಿದಳು. ಎಲ್ಲ ಕಡೆಗೂ ಗಾಢಾಂಧಕಾರವು. ಗುಹೆಯ ಮುಖವು ಇಂಥಲ್ಲಿಯೇ ಇರುವದೆಂಬದು ಕೂಡ ಆಕೆಗೆ ತಿಳಿಯದಾಯಿತು. ಆಗ ಅವಳು ಬಾಗಿಲವನ್ನು ಶೋಧಿಸಿ, ಸಾಧಿಸಿದರೆ ಇಲ್ಲಿಂದ ಪಾರಾಗಿ ಹೋಗಬೇಕೆಂದು ಇಚ್ಛಿಸಿದಳು. ಒಂದುವೇಳೆ ಪಾರಾಗಿ ಹೋಗಲಿಕ್ಕೆ ಸಂಧಿಯು ದೊರೆಯದಿದ್ದರೆ

ಆತ್ಮಹತ್ಯೆಯನ್ನಾದರೂ ಮಾಡಿಕೊಂಡು ಆರ್ಯಸ್ತ್ರೀಯರಿಗುಚಿತವಾದ ಶೀಲ ವನ್ನು ಕಾಯ್ದುಕೊಳ್ಳಬೇಕೆಂದು ನಿಶ್ಚಯಿಸಿದಳು. ಈ ಪ್ರಕಾರ ಮನದಲ್ಲಿ ಯೋಚಿಸಿ ಆಕೆಯು ಮೆಲ್ಲಗೆ ಎದ್ದು ಕತ್ತಲಲ್ಲಿ ಕೈಯಾಡಿಸುತ್ತ ನಡೆದಳು. ಕೆಲ ಹೊತ್ತಿನ ಮೇಲೆ ಒಂದು ಗೋಡೆಯು ಆಕೆಯ ಕೈಗೆ ಹತ್ತಿತು. ಆಕೆಯು ಎದ್ದು ನಿಂತು ಆ ಗೋಡೆಯ ತುಂಬ ಕೈಯಾಡಿಸಿ ನೋಡಿದಳು. ಬಳಿಕ ಅವಳು ಆ ಗೋಡೆಯನ್ನು ಹಿಡಿದು ಮೆಲ್ಲಗೆ ಸಾಗಿದಳು. ಸ್ವಲ್ಪ ದೂರ ಹೋಗು ವಷ್ಟರಲ್ಲಿ ಒಂದು ಬಾಗಿಲವು ಹತ್ತಿತು. ಆದರೆ ಎಲ್ಲಿಯೂ ಬೆಳಕು ಕಂಡು ಬರ ಲಿಲ್ಲ. ಆದದ್ದಾಗಲೆಂದು ಆಕೆಯು ಆ ಬಾಗಿಲವನ್ನು ದಾಟಿ ಒಳಗೆ ಹೋದಳು. ಅಲ್ಲಿಯೂ ಗೋಡೆಯ ಆಶ್ರಯದಿಂದಲೇ ಸಾಗಿದಳು. ಸುಮಾರು ನಾಲ್ಕಾರು ಮೊಳ ಹೋಗಲು ಗೋಡೆಯು ಎಡಕ್ಕೆ ಹೊರಳಿತ್ತು. ರಾಜನಂದಿನಿಯೂ ಹೊರಳಿ ಮುಂದಕ್ಕೆ ಸಾಗಿದಳು. ಅಲ್ಲಿ ಅವಳಿಗೆ ಗೋಡೆಯಲ್ಲಿ ಒಂದು ಚಚ್ಚೌ ಕಾದ ಖಿಂಡಿಯು ಕಾಣಿಸಿತು. ಬೆಳಕನ್ನು ನೋಡಿ ಅವಳಿಗೆ ಅಂಥ ಕಷ್ಟದಲ್ಲಿ ಯೂ ಸಂತೋಷವೆನಿಸಿತು. ಕೂಡಲೆ ಅವಳು ಆ ಖಿಂಡಿಯಲ್ಲಿ ನುಗ್ಗಿ ಗುಹೆ ಯನ್ನು ದಾಟಿದಳು. ಅಲ್ಲಿ ಅವಳು ನಿಂತು ನೋಡಲು ತಾನಿರುವ ಗುಹೆಯ ಮೇಲ್ಭಾಗವು ಗಗನಚುಂಬಿತವಾಗಿತ್ತು. ಇಷ್ಟೇ ಅಲ್ಲ; ಮೇಲೆ ಹಲವು ಬಗೆಯ ವೃಕ್ಷಗಳು ಬೆಳೆದು ಭಯವನ್ನು ಸೂಚಿಸುತ್ತಿದ್ದವು. ರಾಜನಂದಿನಿಯು ಇದ್ದ ಗುಹೆಗೆ ಹೊಂದಿಯೇ ಬೇರೊಂದು ಗುಹೆಯಿದ್ದಿತು. ಆ ಗುಹೆಗೆ ಹೋಗಲಿಕ್ಕೆ ಒಂದು ಸಣ್ಣ ಮಾರ್ಗವಿತ್ತು, ಆ ಮಾರ್ಗದಲ್ಲಿಳಿದು ಆ ಹೊಸ ಗುಹೆಯೊಳಗೆ ಹೋಗಬೇಕೆಂಬ ಇಚ್ಛೆಯು ಆಕೆಗಾಯಿತು. ಆದರೆ ಅಲ್ಲಿ ಹೋದರೆ ಮತ್ತಾವ ಹೊಸ ಸಂಕಟವೊದಗುವದೋ ಎಂದು ಅಂಜಿದಳು. ಹೊಸ ಗುಹೆಯಲ್ಲಿ ಸೇರಿ ಕೊಳ್ಳಬೇಕು. ಇಲ್ಲವೆ ಈಗ ತಾನಿದ್ದ ಗುಹೆಯನ್ನು ಪ್ರವೇಶಮಾಡಬೇಕು. ಎಂದು ಯೋಚಿಸಿ, ಬೇರೆ ಗತ್ಯಂತರವೇ ಇಲ್ಲವೆಂಬದು ಕಂಡುಬರಲು ಅವಳು ಅಂಜಿಕೆಯನ್ನು ಬಿಟ್ಟು ಬೇರೊಂದು ಗುಹೆಯ ಖಿಂಡಿಯಲ್ಲಿ ಧುಮುಕಿದಳು. ಆಗ ಅವಳಿಗೆ ಅಲ್ಲಿ ಒಂದು ಸುಂದರ ದೃಶ್ಯವು ಕಣ್ಣಿಗೆ ಬಿದ್ದಿತು.

"ಆ ಗುಹೆಯ ಒಳಭಾಗದಲ್ಲಿ ಪ್ರಶಸ್ತವಾದ ಅಂಗಳವಿತ್ತು. ಅಲ್ಲಿ ಸ್ವಚ್ಛ ವಾದ ಸೂರ್ಯಪ್ರಕಾಶವು ಬಿದ್ದಿತ್ತು. ಆ ಅಂಗಳದಲ್ಲಿ ದ್ರಾಕ್ಷಿಯ ಬಳ್ಳಿಗಳು ನೊಗವನ್ನು ಬೀರುತ್ತಿದ್ದವು. ಅವುಗಳಿಂದ ಸುಂದರವಾದ ಒಂದು ಮಂಟಪವು

ನಿರ್ಮಾಣವಾಗಿತ್ತು. ಮಂಟಪದ ಆಚೆಯ ಭಾಗದಲ್ಲಿ ಓರ್ವ ಸುಂದರಿಯು ನಿಂತುಕೊಂಡಿದ್ದಳು."

ಈ ಪ್ರಕಾರ ಕಂಡುಬಂದ ಸಂಗತಿಯನ್ನು ನೋಡಿ, ರಾಜನಂದಿನಿಯು ಬೆರಗಾಗಿ ಅಲ್ಲಿಯೇ ನಿಂತಳು. ಇಂಥ ಘೋರಾರಣ್ಯದಲ್ಲಿ ಈ ತರುಣಿಯು ಯಾಕೆ ಇರುವಳೆಂಬದೇ ಆಕೆಗೆ ತಿಳಿಯದಾಯಿತು. ಆಕೆಯು ವಿಚಾರಗ್ರಸ್ತಳಾಗಿ ಸುಮ್ಮನೇ ನಿಂತುಕೊಂಡಳು. ಆಗ ಗುಹೆಯಲ್ಲಿದ್ದ ಆ ತರುಣಿಯು ಮುಂದೆ ಬಂದು ಕನಿಕರಭಾವದಿಂದ:—

"ತಂಗೀ, ನೀನಾರವ್ವಾ? ನನ್ನಂತೆ ನೀನೂ ಆ ನೀಚನ ದವಡೆಯಲ್ಲಿ ಸಿಕ್ಕಿರುವಿಯಾ?" ಎಂದು ಕೇಳಿದಳು.

ತರುಣಿಯ ಮಾತಿನಿಂದ ರಾಜನಂದಿನಿಯು ಸ್ವಲ್ಪ ಧೈರ್ಯವ ತಂದು ಕೊಂಡಳು. ಮತ್ತು ಅವಳನ್ನು ಕುರಿತು:—ನೀವೂ ನನ್ನಂತೆಯೇ ದೈವ ದುರ್ವಿಲಾಸಕ್ಕೆ ಒಳಗಾದವರೇನು? ಹಾಗಾದರೆ ನಮ್ಮನ್ನು ಅಪಹರಿಸಿದವರ್‍ಯಾರು? ಹೀಗೆ ಸುಂದರ ತರುಣಿಯರನ್ನು ಅಪಹರಿಸಿ, ಈ ಗುಹೆಯಲ್ಲಿ ಸೆರೆಯಿಡಿಸುವದರಲ್ಲಿ ಅವರ ಉದ್ದೇಶವೇನು?" ಎಂದು ನುಡಿದಳು.

"ಇಲ್ಲಿ ಬಾ, ನಿನಗೆ ಎಲ್ಲ ಹೇಳುತ್ತೇನೆ" ಎಂದು ಗುಹೆಯೊಳಗೆ ಕರೆದು ಕೊಂಡು ಹೋದಳು; ಮತ್ತು ನುಡಿದಳೇನಂದರೆ—"ನನ್ನನ್ನು ಇಲ್ಲಿಗೆ ಅಪ ಹರಿಸಿ ತಂದವನು ಓರ್ವ ಪುಂಡನಾಗಿರುತ್ತಾನೆ. ಅವನ ಬಳಿಯಲ್ಲಿ ಸಾವಿರಾರು ಜನ ಪುಂಡರಿರುವರು. ನಾನು ಸೌರಾಷ್ಟ್ರದೇಶದ ಅರಸುಮಗಳು. ನನಗೆ ಬೇಟೆಯಾಡುವ ಲಕ್ಕು ಬಹಳವಿತ್ತು. ಅದಕ್ಕೋಸ್ಕರ ನಾನು ನನ್ನ ಪದ್ಧತಿ ಯಂತೆ ಕೆಲಜನ ಸೈನಿಕರನ್ನು ಕರೆದುಕೊಂಡು ತುರುಗಾರೂಢಳಾಗಿ ಒಂದು ದಿನ ಬೇಟೆಗೆ ಹೊರಟೆನು. ನಾನು ಕಾಡುಮೃಗಗಳನ್ನು ಕೊಲ್ಲುತ್ತ ನಡೆದಿರಲು ಸೈನಿಕರಿಗೂ ನನಗೂ ಸ್ವಲ್ಪ ತಪ್ಪುಗುಂಟಾಯಿತು. ಆಗ ನನ್ನ ಕುದುರೆಗೆ ಏನಾ ಯಿತೋ ತಿಳಿಯದು, ಹುಚ್ಚೆದ್ದು ಓಡಲಾರಂಭಿಸಿತು. ನಾನು ಕಡಿವಾಣವನ್ನು ಎಷ್ಟು ಬಿಗಿಹಿಡಿದರೂ ಅದು ಮಣಿಯಲಿಲ್ಲ. ಅದು ನನ್ನನ್ನು ಹೊತ್ತುಕೊಂಡು ಒಂದು ಹಗಲು ಒಂದು ರಾತ್ರೆ ಒಂದೇಸವನೆ ಓಡಿತು. ಅದು ಓಡುತ್ತಿರುವಾಗ ನಾನು ಕೆಳಗೆ ಧುಮುಕಿ ಪ್ರಾಣತ್ಯಾಗ ಮಾಡಿದ್ದರೆ, ಇಲ್ಲವೆ ವೃಕ್ಷಗಳ ಕೊಂಬೆ ಗಳು ಬಡೆದು ನನ್ನ ಪ್ರಾಣವು ಹೊರಟು ಹೋಗಿದ್ದರೆ ಬಹಳ ಒಳಿತಾಗುತ್ತಿತ್ತು.

ಆದರೆ ನಾನು ಇನ್ನೂ ಯಾವ ಅನರ್ಥಗಳನ್ನು ಅನುಭವಿಸಬೇಕಾಗಿದೆಯೋ ತಿಳಿಯದು! ಅದಕ್ಕಾಗಿಯೇ ಬದುಕಿ ಉಳಿದೆನು. ಕುದುರೆಯ ಮೇಲೆ ಕುಳಿತಾಗ ನನಗೆ ದೇಹಭಾನವೇ ತಪ್ಪಿಹೋಗಿತ್ತು. ತಿರುಗಿ ಎಚ್ಚತ್ತ ಬಳಿಕ ನೋಡುವಷ್ಟರಲ್ಲಿ ನಾನು ನೆಲದ ಮೇಲೆ ಒಂದು ವೃಕ್ಷದ ಕೆಳಗೆ ಬಿದ್ದುಕೊಂಡಿದ್ದೆನು. ನನ್ನ ಕುದುರೆಯು ಕೆಲ ಅಂತರದನೇಲೆ ಸತ್ತು ಬಿದ್ದಿತ್ತು. ಆಗ ನನಗೆ, ನಾನು ಎಲ್ಲಿಗೆ ಬಂದೆನೆಂಬದೇ ತಿಳಿಯದಾಯಿತು. ಘೋರಾರಣ್ಯ, ನಮ್ಮ ರಾಜಧಾನಿಯು ಎತ್ತ ಉಳಿಯಿತೋ ಎಂಬಗು ಕೂಡ ತಿಳಿಯದಾಯಿತು ನನಗೆ ಅನಿವಾರವಾದ ದುಃಖವಾಯಿತು. ಮೈಯೆಲ್ಲ ಹಣ್ಣುಹಣ್ಣಾದ್ದರಿಂದ ಅಲ್ಲಿಯೇ ಶೋಕಿಸುತ್ತ ಬಿದ್ದುಕೊಂಡೆನು.

ಹೀಗೆ ನಾನು ಆ ಅರಣ್ಯದಲ್ಲಿ ಅನಾಥಳಾಗಿ ಬಿದ್ದಿರಲು, ಪುಂಡರದೊಂದು ತಂಡವು ಅಲ್ಲಿಗೆ ಬಂದಿತು. ನನ್ನನ್ನು ಅವರು ನೋಡಿದರು. ಸುಂದರ ಯುವತಿಯರನ್ನು ನೋಡಿದರೆ ಈಗಿನಕಾಲದ ಪುರುಷಾಧಮರಿಗೆ ಹ್ಯಾಗೆ ಹ್ಯಾಗೋ ಅನಿಸುತ್ತದೆ. ಅವರು ಕೂಡಲೆ ಪಾಪಬುದ್ಧಿಯನ್ನು ತಾಳುವರು. ಅದರಂತೆ ನನ್ನನ್ನು ನೋಡಿ ಆ ಪುಂಡರ ನಾಯಕನಿಗೆ ದುರ್ಬದ್ಧಿಯುಂಟಾಯಿತು. ಅವನು ನನ್ನನ್ನು ಒಂದು ಡೋಲಿಯಲ್ಲಿ ಹಾಕಿಕೊಂಡು ಈ ಗುಹೆಗೆ ತಂದನು. ಕಳ್ಳರು ನನ್ನನ್ನು ಸೆರೆಹಿಡಿದಾಗ ನಾನು ಮೂರ್ಛಿತಳಾದೆನು. ತಿರುಗಿ ಎಚ್ಚತ್ತಾಗ ನಾನು ಈ ಗುಹೆಯಲ್ಲಿದ್ದೆನು. ನಾನು ಇಲ್ಲಿಗೆ ಒಂದು ಎಂಟುದಿನಗಳಾದವು. ನನ್ನನ್ನು ಇಲ್ಲಿ ತಂದಿರಿಸಿದ ಬಳಿಕ ಆ ಕಳ್ಳರನಾಯಿಕನು ಇಲ್ಲಿಗೆ ಬಂದಿಲ್ಲ. ನಾನು ಇಲ್ಲಿ ಈ ಹಣ್ಣುಹಂಪಲಗಳನ್ನು ತಿನ್ನುತ್ತ ಕಾಲಕ್ರಮಿಸುತ್ತಿದ್ದೇನೆ. ಆ ನೀಚನು ಇಲ್ಲಿಗೆ ಬಂದರೆ ಅವನನ್ನು ಚೆನ್ನಾಗಿ ತಿರಸ್ಕರಿಸುವೆನು. ಅವನಿಗೆ ಹೇಯಬುದ್ಧಿಯುಂಟಾದರೆ ಅವನ ಸಹಾಯದಿಂದ ತಿರುಗಿ ರಾಜಧಾನಿಗೆ ಹೋಗಬೇಕೆಂದೆನ್ನುತ್ತೇನೆ. ಒಂದುವೇಳೆ ಆ ನೀಚನು ಪಾಪಬುದ್ಧಿಯನ್ನೇ ತಾಳಿದರೆ ಪ್ರಾಣತ್ಯಾಗ ಮಾಡಿ ನನ್ನ ಶೀಲವನ್ನು ಕಾಯ್ದುಕೊಳ್ಳಬೇಕೆಂದು ಮಾಡಿದ್ದೇನೆ. ಇದಕ್ಕೋಸ್ಕರವಾಗಿಯೇ ಇದು ವರೆಗೆ ನಾನು ಜೀವಿಸಿರುವೆನು. ತಂಗೀ, ನೀನು ಆ ದುಷ್ಟರಿಗೆಲ್ಲಿ ದೊರೆತೆ? ಇಲ್ಲಿಗೆ ಬಂದು ಎಷ್ಟು ದಿನಗಳಾದವು?

ಈ ಮೇರೆಗೆ ತರುಣಿಯು ತನ್ನ ಸಂಗತಿಯನ್ನು ಹೇಳಿ ಪ್ರಶ್ನೆಮಾಡಲು, ರಾಜನಂದಿನಿಯು ದುಃಖಿಸುತ್ತ ಆಮೂಲಾಗ್ರವಾಗಿ ತನ್ನ ಸಂಗತಿಯನ್ನು ಹೇಳಿ

ದಳು. ಇಬ್ಬರೂ ಸಮದುಃಖಿಗಳಾದ್ದರಿಂದ ಒಬ್ಬರಿಗೊಬ್ಬರು ಅಪ್ಪಿಕೊಂಡು ಘನಘೋರವಾಗಿ ಅತ್ತರು. ಮುಂದೆ ತಮ್ಮಿಬ್ಬರ ಗತಿಯೇನೆಂದು ಅವರು ಚಿಂತಿಸಿದರು. ಸೌರಾಷ್ಟ್ರ ರಾಜಪುತ್ರಿಯು ಬಹು ಚಾಣಾಕ್ಷಳಿದ್ದಳು. ಆಕೆಯು ರತ್ನಾಕರನ ಗುಣವರ್ಣನೆಯಿಂದ ಅವನು ಸಾಮಾನ್ಯನಲ್ಲನೆಂದು ತರ್ಕಿಸಿ, ರಾಜನಂದಿನಿಯನ್ನು ಕುರಿತು—ತಂಗೀ, ನಿನ್ನ ಸಂಕಟ ನಿವಾರಕನಾದ ರತ್ನಾಕರ ರಾಜಪುತ್ರನು ಬಹುಶಃ ನಿನ್ನನ್ನು ಶೋಧಿಸದೆ ಬಿಡಲಾರನು. ನಿನ್ನ ಯೋಗದಿಂದ ನನ್ನ ಮುಕ್ತತೆಯೂ ಆಗಬಹುದು. ಇಗೋ, ನನ್ನ ಎಡಗಣ್ಣು ಸ್ಫುರಣಗೊಳ್ಳುವದು. ನಿಶ್ಚಯವಾಗಿ ಆ ರಾಜಪುತ್ರನು ಇಲ್ಲಿಗೆ ಬರುವನು, ಎಂದು ನುಡಿದಳು. ಅವರಿಬ್ಬರೂ ಆಶಾವಾದಿಗಳಾಗಿ ರಾಜಪುತ್ರನ ಮಾರ್ಗ ಪ್ರತೀಕ್ಷೆ ಮಾಡುತ್ತ ಆ ಗುಹೆಯಲ್ಲಿಯೇ ಅಜ್ಞಾತವಾಸ ಮಾಡಿದರು!

---

## ೧೧ನೆಯ ಪ್ರಕರಣ—ಒಬ್ಬರಿಗಿಂತ ಇಬ್ಬರುಲೇಸು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ರಾಜಪುತ್ರನು ಒಬ್ಬನೇ ಅರಣ್ಯದಲ್ಲಿ ಶ್ರಮಿಸುತ್ತಿದ್ದಾನೆ. ಅವನ ಮುಖವು ಭಯಂಕರವಾದ ಚಿಂತೆಯಿಂದ ಆವರಿಸಿತ್ತು. ಅವನ ಪ್ರಿಯ ನೀಲಮೇಘವು ಕಳ್ಳರ ಉಪಟಳದಲ್ಲಿ ಸಿಲುಕಿ, ಪರಲೋಕಕ್ಕೆ ಹೋಗಿತ್ತು. ಅವನ ಆತ್ಮಸಂರಕ್ಷಣೆಯ ಸಾಧನವು, ಟೊಂಕದಲ್ಲಿ ಅಲೆದಾಡುತ್ತಿದ್ದ ಖಡ್ಗವೊಂದೇ ಆಗಿತ್ತು. ಅವನಿಗೆ ಹಸಿವೆ-ನೀರಡಿಕೆಗಳ ಪರಿವೆಯೇ ಇದ್ದಿಲ್ಲ. ಕಾಲುಗಳು ಕೆಂಧೂಳಿಯಿಂದ ಮುಸುಕಿ ಹೋಗಿದ್ದವು. ದಿನಕರನ ಉಗ್ರಕಿರಣಗಳು ಅವನ ಶರೀರವನ್ನು ದಹಿಸುತ್ತಿದ್ದವು. ಪಾಪ! ರಾಜಪುತ್ರನ ಆಗಿನ ಸ್ಥಿತಿಯು ಹೇಗಿರಬಹುದು? ಮೃದುವಾದ ಶಯ್ಯೆಯಲ್ಲಿ ಮಲಗಿ, ರಮಣೀಮಣಿಗಳಿಂದ ಚಾಮರ ಬೀಸಿಸಿಕೊಳ್ಳುತ್ತಿದ್ದ ಆತನಿಗೆ ಈಗಾರು ಚಾಮರ ಬೀಸಬೇಕು? ಮೃದುವಾದ ಬೆರಳುಗಳಿಂದ ತಂಬೂರಿಯ ತಂತುಗಳನ್ನು ನುಡಿಸುತ್ತ, ಕೋಕಿಲವನ್ನು ನಾಚಿಸುವಂಥ ಮನೋಹರವಾದ ಧ್ವನಿಯಿಂದ ಹಾಡುವ ರಮಣಿಯರ ಗಾನವು ಈಗ ಅವನಿಗೆಲ್ಲಿ ಸಿಗಬೇಕು? ನೂಪುರಗಳ ಇಂಪಾದ ಧ್ವನಿಯೊಂದಿಗೆ ನರ್ತಿಸುತ್ತಿದ್ದ ನರ್ತಕಿಯರ ನರ್ತನವು ಅವನಿಗೆ ಇಲ್ಲೆಲ್ಲಿ ದೊರೆಯಬೇಕು?

ಇಂತು ಕಷ್ಟಕ್ಕೀಡಾಗಿರುವ ಆ ರಾಜಪುತ್ರನನ್ನು ಶಾಂತಗೊಳಿಸಲು ವನ ದೇವತೆಯು ಪ್ರಯತ್ನಿಸತೊಡಗಿದಳು. ಮಂದಮಾರುತನ ಪ್ರೇರಣೆಯಿಂದ ಕಂಪಿತವಾದ ವೃಕ್ಷಗಳು ಅವನಿಗೆ ಗಾಳಿಯನ್ನು ಬೀಸಹತ್ತಿದವು. ಪುಷ್ಪಗಳೊಳಗಿನ ಮಧುವನ್ನು ಸೇವಿಸಲು ಬಂದ ಭ್ರಮರಗಳೂ, ಪಕ್ವಫಲಗಳನ್ನು ಕಡಿ-ಕಡಿದು ಒಗೆಯುತ್ತಿರುವ ಕೋಕಿಲಗಳೂ ತಮ್ಮ ಮಧುರ ಸ್ವರದಿಂದ ರಾಜ ಕುವರನ ಮನಕ್ಕೆ ಶಾಂತಿಯನ್ನು ತರಲು ಹವಣಿಸುತ್ತಿದ್ದಂತೆ ಭಾಸವಾಗಹತ್ತಿತು. ರಾಜಕುವರನನ್ನು ನೋಡಿ ನಾಚಿ ದೂರದಲ್ಲಿ ನಿಂತಿರುವವೋ ಎಂಬಂತೆ ಮಯೂರಗಳು ನರ್ತಿಸುತ್ತ ಕೇಕು ಹಾಕುತ್ತಿದ್ದವು; ಆದರೆ ಇವುಗಳಿಂದ ರಾಜ ಕುವರನಿಗೆ ಸಮಾಧಾನವಾಗಬಲ್ಲದೆ? ಅವನ ಹೃದಯವನ್ನು ದಹಿಸುತ್ತಿದ್ದ ಚಿಂತೆಯು, ಉಳಿದ ಸುಖ-ಶಾಂತಿಗಳಿಗೆ ಸ್ವಲ್ಪಾದರೂ ಆಸ್ಪದವನ್ನು ಕೊಡದೆ ತನ್ನ ಬಲವನ್ನೇ ಮತ್ತಿಷ್ಟು ದೃಢೀಕರಿಸಹತ್ತಿತು.

ರಾಜಕುವರನು ತುಸ ದೂರ ಹೋದ ಮೇಲೆ ಅವನಿಗೆ ಒಂದು ಸರೋವರವು ಹತ್ತಿತು. ಅದನ್ನು ನೋಡಿ ಅವನಿಗೆ ಸ್ವಲ್ಪ ಸಮಾಧಾನವೆನಿಸಿತು. ಅವನು ಆ ತಂಗೊಳದಲ್ಲಿ ಮನದಣಿ ಮಿಂದು, ಸಮೀಪದ ಫಲವೃಕ್ಷದೊಳಗಿನ ಫಲಗಳಿಂದ ಕ್ಷುಧಾಶಾಂತಿಯನ್ನು ಮಾಡಿಕೊಂಡನು. ಆ ಮೇಲೆ ಸರೋವರದ ದಂಡೆಯ ಮೇಲಿರುವ ಪ್ರಶಸ್ತವಾದ ಆಲದಮರದೆಡೆಗೆ ಬಂದು ಮೆಲ್ಲಗೆ ಅಡ್ಡಾದನು. ಒಂದೇಸವನೆ ದಾರಿಯ ನಡೆಯುವಿಕೆಯಿಂದಾದ ದಣುವಿನಿಂದ ಅವನಿಗೆ ನಿದ್ರೆ ಬರಬಹುದಾಗಿತ್ತು; ಆದರೆ ನಿದ್ರಾದೇವಿಯು ಅವನಿಗೆ ಹೇಗೆ ಪ್ರಸನ್ನಳಾಗಬೇಕು? ಆ ನಿರ್ಜನವಾದ ಪ್ರದೇಶದಲ್ಲಿ-ಆ ಶಾಂತಿಮಯ ಸೌಂದರ್ಯದ ಆಗರದಲ್ಲಿ-ಹಾಸಿಗೆಯಿಲ್ಲದೆ ಹಾಸುಗಲ್ಲ ಮೇಲೆ, ದಾಸ-ದಾಸಿಯರನ್ನು ಬಿಟ್ಟು ಬಂದ ಆ ತರುಣನಿಗೆ, ಚಿಂತಾಭಾರದಿಂದ ಜರ್ಜರನಾದ ಅವನಿಗೆ ನಿದ್ರಾದೇವಿಯು ಇಂಬುಗೊಡಬಹುದೆ? ಅವನು ಕಲ್ಲಮೇಲೆ ಬಿದ್ದುಕೊಂಡು—"ಈ ಪ್ರಸಂಗದಲ್ಲಿ ರಾಜನಂದಿನಿಯಿದ್ದರೆ ಅವಳಿಗೆ ಎಷ್ಟು ಸಂತೋಷವಾಗುತ್ತಿತ್ತು? ಈ ಮನೋಹರವಾದ ತಾವರೆಗಳೂ, ಈ ತಾವರೆಗಳೊಳಗಿನ ಪರಾಗವನ್ನು ಕದ್ದುಕೊಂಡು ಬರುವ ಈ ಮಂದಮಾರುತವು ಅವಳನ್ನು ಚನ್ನಾಗಿ ಸ್ವಾಗತಮಾಡುತ್ತಿದ್ದವು. ಆದರೆ ದುರ್ದೈವಿಯಾದ ಆ ರಾಜಕುವರಿಗೆ ಎಷ್ಟು ತೊಂದರೆಗಳೊದಗಬೇಕಾಗಿದೆಯೋ ಏನೋ! ಪಾಪ! ಅವಳು ಎಷ್ಟು ಕಷ್ಟಪಡಬೇಕಾಯಿತಲ್ಲ!

ನಾನು ಅವಳನ್ನಗಲಿ ಇಂದಿಗೆ ಎಂಟು ದಿನಗಳಾದವು; ಆದಗೂ ಅವಳ ಸುದ್ದಿಯೇ ಇಲ್ಲ. ಇದೇನು ವಿಚಿತ್ರವಿರಬಹುದು? ನಾನಿನ್ನು ರಾಜನಂದಿನಿಯ ಮುಖವನ್ನು ತಿರುಗಿ ಕಾಣಬಹುದೆ? ಒಂದು ವೇಳೆ ಆ ನೀಚರು ಅವಳನ್ನು ಪೃಥ್ವಿಯ ಮೇಲೆ ಇಲ್ಲದಂತೆ ಮಾಡಿದ್ದರೆ? ಛೇ, ಛೇ! ಹಾಗೆಂದೂ ಆಗಲು ಶಕ್ಯವಿಲ್ಲ. ಸುಂದರ ವಸ್ತುಗಳಿಗೆ ಯಾರಾದರೂ ಸ್ಥಾನವನ್ನು ಕೊಡುವರು. ಅದರಂತೆ ಆ ಕಳ್ಳರು ಸಹ ಅವಳನ್ನು ಒಂದು ಭದ್ರವಾದ ಸ್ಥಳದಲ್ಲಿ ಇರಿಸಿರಬಹುದು. ಅವಳನ್ನು ಈ ಪೃಥ್ವಿಯನ್ನು ಬಿಟ್ಟು ಬೇರೆ ಇರಿಸಿರಲಿಕ್ಕಿಲ್ಲವಷ್ಟೆ? ಅಂದಮೇಲೆ ನಾನು ಚಿಂತೆ ಮಾಡುವದೇಕೆ? ಅವಳು ಎಲ್ಲಿದ್ದರೂ ನಾನು ಅವಳನ್ನು ಹುಡುಕುವೆನು. ಆದರೆ ಇನ್ನೊಮ್ಮೆ ನನಗೆ ಅವಳ ದರ್ಶನವಾಗಬಹುದಷ್ಟೆ? ಅಹಾ! ಅವಳ ನಯನ ಮನೋಹರವಾದ ರೂಪವೂ, ಹರಿಣಾಕ್ಷಿಗಳೂ, ಮಂಜುಳ ಧ್ವನಿಯೂ ನನ್ನನ್ನು ಅಂದೇ ಧನ್ಯವಾಗ ಮಾಡಿಬಿಟ್ಟವು! ಅವಳ ಲಾವಣ್ಯವೇನು? ಅವಳ ಮಾತಿನ ಹೊಯ್ಲೇನು? ಆ ರಾಜಪುತ್ರಿಯು ನಿಜವಾಗಿಯೂ ಧನ್ಯಳು!" ಎಂದು ನೆನೆನೆನಿಸಿ ದುಃಖಿಸಲಾರಂಭಿಸಿದನು.

ಕೆಲಹೊತ್ತಿನ ಮೇಲೆ ಅವನು ಎದ್ದು ಕುಳಿತನು. ಮತ್ತು ತನ್ನ ಖಡ್ಗದ ಹಿಡಿಕೆಯನ್ನು ಗಟ್ಟಿಯಾಗಿ ಒತ್ತುತ್ತ—"ಆ ದುಷ್ಟರು ನಾನು ಎದುರಿಗಿರಲಿಕ್ಕೆ ಅವಳನ್ನು ಒಯ್ದರಲ್ಲವೆ? ಇದು ಎಂಥ ಭಯಂಕರ ಅವಮಾನವು? ಇದು ನನ್ನಂಥ ಕ್ಷಾತ್ರವೀರನಿಗೆ ಸಲ್ಲುವದೆ? ಅಲ್ಲಿ ರಾಜನಂದಿನಿಯು ನನ್ನನ್ನು ನೆನಿಸಿ ಕಷ್ಟ ಬಡುತ್ತಿರಬಹುದು. ಅವಳು ನನ್ನ ಮೇಲೆ ವಿಶ್ವಾಸವಿಟ್ಟು, ನನ್ನ ಮಾರ್ಗ ಪ್ರತೀಕ್ಷೆ ಮಾಡುತ್ತಿರಬಹುದು. ಆ ರಾಜಪುತ್ರಿಯೊಬ್ಬರ್ಳನ್ನೇ ಅಲ್ಲಿ ಬಿಟ್ಟು ನಾನು ಹೀಗೆ ನಿದ್ರಿಸುವದು ಸರಿಯಾಗಬಹುದೇ? ಛೇ. ಇದು ಯೋಗ್ಯವಲ್ಲ" ಎಂದು ನುಡಿದು ಆತನು ರಾಜಪುತ್ರಿಯ ಶೋಧಕ್ಕಾಗಿ ಎದ್ದು ನಡೆದನು. ಕ್ಷಣಮಾತ್ರವಾದರೂ ಅಲ್ಲಿರಲು ಅವನಿಗೆ ಮನಸ್ಸಾಗಲಿಲ್ಲ.

ರಾಜಪುತ್ರನು ತುಸ ಹೊತ್ತಿನ ವರೆಗೆ ದಾರಿಯನ್ನು ಕ್ರಮಿಸಿದನು. ಆ ಮೇಲೆ ಅವನು ಮುಂದೆ ನೋಡಿ ಆಶ್ಚರ್ಯದಿಂದ ಸುಮ್ಮನೆ ನಿಂತುಕೊಂಡನು. ಎದುರಿಗೆ ಓರ್ವ ಗೃಹಸ್ಥನು ಒಂದು ಗಿಡದ ಬುಡದಲ್ಲಿ ಮಲಗಿದ್ದನು. ಬಿಸಿಲಿನ ತಾಪದಿಂದ ಅವನಿಗೆ ದಣುವಾದಂತೆ ತೋರುತ್ತಿತ್ತು. ಅವನ ನಡದಲ್ಲಿ ಖಡ್ಗ ವಿತ್ತು. ಆದ್ದರಿಂದ ಅವನೊಬ್ಬ ವೀರಪುರುಷನಿರಬಹುದೆಂದು ರಾಜಕುಮಾ

ರನು ತರ್ಕಿಸಿದನು. ಮತ್ತು ಅಲ್ಲಿಯೇ ನಿಂತು "ಈ ಮನುಷ್ಯನು ಯಾರಾಗಿರ ಬಹುದು? ಇವನು ಮುಸಲ್ಮಾನರ ಕಡೆಯವನಾಗಿರಬಹುದೆ? ಅಲ್ಲಲ್ಲ. ಇವನು ಹಿಂದುವು. ಇವನ ಅರಿವೆಗಳೆಲ್ಲ ಹಿಂದೂ ಪದ್ಧತಿಯವೇ ಆಗಿವೆ. ಅಂದಮೇಲೆ ಇವನು ಕಳ್ಳರಗುಂಪಿನೊಳಗಿನವನಾಗಿರಬಹುದೆ? ಇವನು ಕಳ್ಳರಗುಂಪಿನವ ನಾಗಿದ್ದರೆ, ಇಂಥ ನಿರ್ಜನ ಪ್ರದೇಶದಲ್ಲಿ ತನ್ನ ಜನರನ್ನು ಬಿಟ್ಟು ಏಕೆ ಬರುತ್ತಿ ದ್ದನು? ಇಲ್ಲವೆ ಇವನು ನನ್ನಂತೆ ಕಷ್ಟಕ್ಕೊಳಗಾದ ಯಾವನೊಬ್ಬ ರಾಜಪುತ್ರ ನಾಗಿರಬಹುದೆ? ಏನೂ ತಿಳಿಯುವಂತಿಲ್ಲ. ಎಲ್ಲವೂ ದೇವರಿಗೇ ಗೊತ್ತು. ಈಗ ನಾನು ಇಲ್ಲಿ ನಿಲ್ಲದೆ ಒಂದು ಗಿಡದ ಮರೆಗೆ ನಿಂತುಕೊಳ್ಳುವೆನು; ಇವನು ಎದ್ದ ಮೇಲೆ ಎಲ್ಲಿಗೆ ಹೋಗುತ್ತಾನೆಂಬದನ್ನು ನೋಡೋಣ" ಎಂದು ನುಡಿದು ಅವನು ಒಂದು ಗಿಡದ ಮರೆಗೆ ನಿಂತುಕೊಂಡನು.

ತುಸ ಹೊತ್ತಿನಮೇಲೆ ಮಲಗಿದ ಆ ಗೃಹಸ್ಥನು ಎದ್ದು ಕುಳಿತು ಸುತ್ತಲೂ ನೋಡಿದನು. ಸೂರ್ಯನು ಕೆಳಗಿಳಿಯಹತ್ತಿದ್ದನು. ಆಗ ಅವನಿಗೆ ಬಹು ಖೇದ ವೆನಿಸಿತು. ಅವನು ಒಂದು ನಿಟ್ಟುಸಿರು ಬಿಟ್ಟು ಗಟ್ಟಿಯಾಗಿ—"ಹಾಯ್! ಇನ್ನು ನಾನು ಹ್ಯಾಗೆ ಮಾಡಲಿ? ನನ್ನ ಸೇನಾನಾಯಕನನ್ನು ಬಿಟ್ಟು ಇಂದಿಗೆ ಬಹು ದಿನಗಳಾದವು. ಇದುವರೆಗೆ ರಾಜಪುತ್ರಿಯನ್ನು ಶೋಧಿಸಿದರೂ ನನಗೆ ಅವಳು ಸಿಗಲಿಲ್ಲ. ಇನ್ನು ನಾನು ಹಾಗೆಯೇ ತಿರುಗಿ ಹೋಗಬೇಕೆಂದರೆ ಮನ ಸ್ಸಾಗಲೊಲ್ಲದು. ರಾಜನಿಗೆ ಮೋರೆ ತೋರಿಸುವಂತಿಲ್ಲ; ಸೇನಾಪತಿಗೆ ಹೇಳಿ ಬರದ್ದರಿಂದ ಅವನಲ್ಲಿಗೂ ಹೋಗುವಂತಿಲ್ಲ. ಅಂದಮೇಲೆ ಇನ್ನು ನಾನು ಹೋಗುವದೆಲ್ಲಿಗೆ? (ಧೈರ್ಯ ತಂದುಕೊಂಡು) ಆಗಲಿ, ನಾನು ನನ್ನ ರಾಜನ ಮೇಲಿನ ಭಕ್ತಿಯಿಂದ ಈ ಕೆಲಸಕ್ಕೆ ಕೈಹಾಕಿದ್ದೇನೆ. ಭಕ್ತಿಯಿಂದ ಮಾಡಿದ ಕೆಲಸವು ಸಿದ್ಧಿಸುವದೆಂದು ದೊಡ್ಡವರು ಹೇಳುತ್ತಾರೆ. ಆದ್ದರಿಂದ ನಾನು ನಿರಾಶನಾಗದೆ ಇನ್ನೊಮ್ಮೆ ರಾಜನಂದಿನಿಯನ್ನು ಹುಡುಕುವ ಎತ್ತುಗಡೆ ಮಾಡು ತ್ತೇನೆ. ನನ್ನ ಈ ದೇಹವು ಸ್ವಾಮಿಕಾರ್ಯಕ್ಕಾಗಿಯೇ ಬಿದ್ದು ಹೋಗಲಿ. ರಾಜನಂದಿನಿಯು ಹೋದಂದಿನಿಂದ ನಮ್ಮ ಮಿಥಿಲಾನಗರಿಯ ಸೌಭಾಗ್ಯವೇ ಹೊರಟು ಹೋದಂತಾಗಿದೆ." ಎಂದು ನುಡಿದು ಚಟ್ಟನೆ ಎದ್ದು ನಿಂತನು.

ಈ ಮಾತುಗಳನ್ನು ಕೇಳಿ ರಾಜಪುತ್ರನಿಗೆ ಬಹಳ ಆಶ್ಚರ್ಯವಾಯಿತು. ಅವನು ಸಂತೋಷಭರಿತನಾಗಿ ಮೆಲ್ಲಗೆ ಆ ಗೃಹಸ್ಥನೆಡೆಗೆ ಬಂದನು. ರಾಜಪುತ್ರ

ನನ್ನು ನೋಡಿ ಅವನಿಗೂ ಬಹಳ ಆಶ್ಚರ್ಯವಾಯಿತು. ಇಂಥ ಪ್ರದೇಶದಲ್ಲಿ-ಈ ಸುಕುಮಾರ ದೇಹದ ಪುರುಷನು ಯಾರೆಂಬದು ಅವನಿಗೆ ತಿಳಿಯಲಿಲ್ಲ. ಅವರು ವಿಸ್ಮಿತರಾಗಿ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಆಗ ರಾಜಪುತ್ರನು ಅವನನ್ನು ಕುರಿತು-''ನೀವು ಎಲ್ಲಿಯವರು?'' ಎಂದು ಕೇಳಿದನು.

ಅವನು ತುಸ ಹೊತ್ತು ವಿಚಾರಿಸಿ—''ನಾನೊಬ್ಬ ಪಾಂತಸ್ಥನು. ನಾನು ನಮ್ಮ ಊರಿಗೆ ಹೊರಟಾಗ್ಗೆ ನಡುವೇ ಕಳ್ಳರು ಗಂಟುಬಿದ್ದು ನನ್ನ ಸಂಪತ್ತನ್ನೂ ನನ್ನ ಒಬ್ಬ ಮಗಳನ್ನೂ ತಕ್ಕೊಂಡು ಹೋಗಿದ್ದಾರೆ. ಇಲ್ಲಿ ಕಳ್ಳರ ಉಪದ್ರವವು ವಿಶೇಷವಿದ್ದದರಿಂದ ಈ ಬಗೆಯಾಗಿ ವೇಷವನ್ನು ಹಾಕಿಕೊಂಡಿದ್ದೇನೆ'' ಎಂದು ನುಡಿದನು.

ಅಂಥ ಪ್ರಸಂಗದಲ್ಲಿಯೂ ಕೂಡ ರಾಜಪುತ್ರನಿಗೆ ನಗೆಬಂದಿತು. ಆವನು ನಿಶ್ಚಯವಾಗಿ ಈತನು ಗುಪ್ತಹೇರನಿರುವನೆಂದು ತಿಳಿದನು. ಇದೇ ಈಗ ಇವನಿಂದ ಹೊರಟ ದುಃಖೋದ್ಗಾರಗಳು ಇವನ ನಿಜಸ್ಥಿತಿಯನ್ನು ಹೇಳುತ್ತಿರಲು ಈಗ ಇವನು ಸುಳ್ಳುಸಂಗತಿಯನ್ನು ಯಾಕೆ ಹೇಳುತ್ತಿರಬಹುದು? ಎಂದು ಯೋಚಿಸಿ, ರಾಜಪುತ್ರನು ಪುನಃ ಅವನನ್ನು ಕುರಿತು:—''ವೀರನೇ, ಹೀಗೇಕೆ ಸುಳ್ಳು ಹೇಳುವೆ? ನಿಜಸಂಗತಿಯನ್ನು ಬಚ್ಚಿಡುವದರಿಂದ ನಿನಗಾವ ಪ್ರಯೋಜನವಿದೆ? ಇದ್ದ ಸಂಗತಿಯನ್ನು ಇದ್ದಕ್ಕಿದ್ದಹಾಗೆ ಹೇಳು,'' ಎಂದನು.

ಹೊಸಬನಿಗೆ ಭಯಂಕರ ಕೋಪಬಂದಿತು ಇವನು ಶತ್ರುಪಕ್ಷದ ಯಾವನೋ ಒಬ್ಬ ಗುಪ್ತಹೇರನಿದ್ದು ಹೀಗೆ ಹಿಂದೂವೇಷವನ್ನಳವಡಿಸಿಕೊಂಡಿರುವನೆಂದು ತಿಳಿದನು. ಅವನು ಸರ್‍ರನೆ ಒರೆಯೊಳಗಿಂದ ಖಡ್ಗವನ್ನು ಹಿರಿದು ರಾಜಪುತ್ರನ ಮೇಲೆ ಧುಮುಕ ತಕ್ಕವನು; ಅಷ್ಟರಲ್ಲಿ ರಾಜಪುತ್ರನು ಅವನ ಕೈಯೊಳಗಿನ ಖಡ್ಗವನ್ನು ಕಸಿದುಕೊಂಡು:—''ವೀರಾ, ನಿನ್ನಂತೆ ನನಗೂ ಯುದ್ಧೋತ್ಸಾಹವಿದೆ; ಆದರೆ ಯುದ್ಧಮಾಡತಕ್ಕ ಸಮಯವಿದಲ್ಲ! ನೀನು ಯಾವ ಮಹತ್ವದ ಕೆಲಸಕ್ಕೆ ಹೊರಟಿರುವೆಯೋ ಅದೇ ಕೆಲಸಕ್ಕೆ ನಾನೂ ಹೊರಟಿರುವೆನು! ಹಿಂದು ಮುಂದಿನ ವಿಚಾರವಿಲ್ಲದೆ ಪರರ ಮೇಲೆ ಸಿಟ್ಟಾಗುವದು ತರವಲ್ಲ; ಇಕೋ ನಿನ್ನ ಖಡ್ಗವನ್ನು. ಇದನ್ನು ಒರೆಗಾಣಿಸು''.

''ನೀವು ಅದಾವ ಕೆಲಸಕ್ಕೆ ಹೊರಟಿರುವಿರಿ?''

''ಕೇಳು! ನಿಮ್ಮ ಆ ಮಿಥಿಲಾ ರಾಜನಂದಿನಿಯನ್ನೇ ಹುಡುಕಲು ನಾನೂ

ಹೊರಟಿರುವೆನು. ನಾನೂ ನಿನ್ನಂತೆಯೇ ಕಷ್ಟಪಟ್ಟು ಇಲ್ಲಿಗೆ ಬಂದಿದ್ದೇನೆ. ಇದುವರೆಗೆ ರಾಜನಂದಿನಿಯನ್ನು ಹುಡುಕಿದೆನು. ಅವಳ ಸುಳಿವು ಇದುವರೆಗೂ ಹತ್ತಲಿಲ್ಲ. ಆದ್ದರಿಂದ ಇತ್ತಣ ದಿಕ್ಕಿಗೆ ಹೊರಟಿದ್ದೇನೆ.'' ಎಂದು ನುಡಿದು ಅವನು ತನ್ನ ಹಿಂದಿನ ಇತಿಹಾಸವನ್ನೆಲ್ಲ ಹೇಳಿದನು.

ಇದನ್ನು ಕೇಳಿದ ಕೂಡಲೆ ಆ ರಾಜಸೇವಕನಿಗೆ ಪರಮ ಹರ್ಷವಾಯಿತು. ರಾಜನಂದಿನಿಯು ಕಂದಹಾರಕ್ಕೆ ಹೋಗಿರದೆ ಇಲ್ಲಿಯೇ ಇರುವಳೆಂದು ನಲಿದಾಡಿದನು. ಅವನು ತನ್ನ ಖಡ್ಗವನ್ನು ಒರೆಗಾಣಿಸಿ ಮೊಳಕಾಲೂರಿ ನಿಂತು ರಾಜಪುತ್ರನನ್ನು ಕುರಿತು—''ಮಹಾರಾಜ, ಸೇವಕನ ಉದ್ಧಟತನವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ. ನಾನು ಮಿಥಿಲಾಧಿಪತಿಯ ಸೈನ್ಯದೊಳಗಿನ ಗುಪ್ತಹೇರನಿರುತ್ತೇನೆ. ನನ್ನ ಹೆಸರು ಅಜಯಸಿಂಹ ನನ್ನ ಸ್ವಾಮಿಯ ಮೇಲಿನ ಪ್ರೇಮದ ಸಲುವಾಗಿ ಇದುವರೆಗೆ ಹೀಗೆ ಕಷ್ಟ ಸಹಿಸುತ್ತ ಬಂದೆನು. ನನ್ನ ಸ್ವಭಾವಕ್ಕನುಸರಿಸಿ, ತಮಗೆ ನನ್ನ ಸಂಗತಿಯನ್ನು ಒಮ್ಮೆಲೆ ಹೇಳಲಿಲ್ಲ ಇಷ್ಟೇ ಅಲ್ಲ; ತಮಗೆ ದ್ರೋಹವನ್ನು ಬಗೆದೆನು. ಇದಕ್ಕಾಗಿ ನನ್ನನ್ನು ತಾವು ಕ್ಷಮಿಸುವಿರೆಂದು ನಂಬಿದ್ದೇನೆ! ನಮ್ಮ ರಾಜನಂದಿನಿಯು ಈ ಅಡವಿಯಲ್ಲಿಯೇ ಇರುವಳೆಂಬದನ್ನು ತಿಳಿದು ನನ್ನ ಅರ್ಧ ಜೀವವು ಬದುಕಿತು, ಎಂದು ನುಡಿದನು.

ಅದಕ್ಕೆ ರಾಜಪುತ್ರನು—''ವೀರನೇ, ನಿನಗೆ ಜಯವಾಗಲಿ! ಏಳು. ನಿನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಿದ್ದೇನೆ. ನಿನ್ನಂಥ ಸ್ವಾಮಿನಿಷ್ಠ ಸೇವಕನನ್ನು ನೋಡಿ ನನಗೆ ಅತ್ಯಾನಂದವಾಗುತ್ತದೆ. ನಿಮ್ಮಂಥ ಸ್ವಾರ್ಥತ್ಯಾಗಿಗಳಿಂದಲೇ ಯಾವದೊಂದು ಕೆಲಸವು ಸಿದ್ಧಿಯಾಗುವದು. ಅಜಯಸಿಂಹ, ನಿನ್ನ ಗುಣವನ್ನು ಕಂಡು ನನಗೆ ಬಹಳ ಆನಂದವಾಯಿತು! ನೀನು ಯಾವ ಕಾರ್ಯ ಸಾಧಿಸುವದಕ್ಕಾಗಿ ಹೊರಟಿರುವೆಯೋ ಅದೇ ಕಾರ್ಯಕ್ಕಾಗಿ ನಾನೂ ಹೊರಟಿರುವೆನು; ಆದರೆ ನೀನು ನಿನ್ನ ಸ್ವಾಮಿಯ ಮೇಲಿನ ಶ್ರದ್ಧೆಯಿಂದ ಆ ಕಾರ್ಯವನ್ನು ಮಾಡುತ್ತಿರುವೆ; ಆದರೆ ನಾನು ಅದು ನನ್ನ ಕರ್ತವ್ಯವೆಂದು ಆ ಕಾರ್ಯವನ್ನು ಮಾಡುತ್ತಿರುವೆನು; ಇನ್ನು ಇಲ್ಲಿ ಮಾತಾಡುತ್ತ ಕುಳಿತುಕೊಳ್ಳುವ ಸಮಯವಲ್ಲ; ಏಳು! ಕಾರ್ಯಕ್ಕೆ ಉದ್ಯುಕ್ತನಾಗು. ತನ್ನ ಸ್ವಾಮಿಯ ಕಾರ್ಯಕ್ಕಾಗಿ ಯಾವನು ದೇಹವನ್ನರ್ಪಿಸಲು ಕೂಡಾ ಹಿಂದು ಮುಂದೆ ನೋಡುವದಿಲ್ಲವೋ ಅವನೇ ನಿಜವಾದ ಸ್ವಾಮಿನಿಷ್ಠ ಸೇವಕನು! ಅಂಥ ಸತ್ವಸ್ಥ ಸೇವಕರಲ್ಲಿ ನೀ-

ನೊಬ್ಬನಿರುವೆ; ಈಗ ನಾವಿಬ್ಬರೂ ಸಮಾನ ದುಃಖಿಗಳಾಗಿದ್ದೇವೆ. ನಾವಿಬ್ಬರೂ ಕೂಡಿ ಆ ಕಾರ್ಯವನ್ನು ಕೊನೆಗಾಣಿಸೋಣ. ನಮ್ಮ ಪ್ರಯತ್ನಕ್ಕೆ ದೇವರು ಯಶಸ್ಸನ್ನು ಕೊಡುವಂತೆ ಪ್ರಾರ್ಥಿಸು. ರಾಜನಂದಿನಿಯ ಶೋಧಕ್ಕಾಗಿ ಒಬ್ಬರಿಗಿಂತ ಇಬ್ಬರು ಲೇಸು'' ಎಂದು ನುಡಿದನು. ಬಳಿಕ ಅವರಿಬ್ಬರೂ ರಾಜಪುತ್ರಿಯನ್ನು ಹುಡುಕಲು ಹೊರಟರು.

## ೧೨ನೆಯ ಪ್ರಕರಣ—ಸಮಾಗಮ.

ಕಳ್ಳರ ಕೈಯೊಳಗೆ ಸಿಲುಕಿದ ಆ ರಾಜಕುವರಿಯರು ರಾಜಪುತ್ರನ ಮಾರ್ಗ ಪ್ರತೀಕ್ಷೆ ಮಾಡಿ ಬೇಸತ್ತರು. ತಮ್ಮ ಬಿಡುಗಡೆಯ ಆಶೆಯನ್ನು ತೊರೆದರು. ಪ್ರತಿದಿನವೂ ರಾಜನಂದಿನಿಯು ರಾಜಪುತ್ರನ ಗುಣಗಾನ ಮಾಡುತ್ತ ದುಃಖಿಸುತ್ತಿದ್ದಳು; ಆದರೆ ಚಾಣಾಕ್ಷಳಾದ ಆ ಸೌರಾಷ್ಟ್ರದೇಶದ ರಾಜಕುವರಿಯು ರಾಜನಂದಿನಿಯನ್ನು ಸಮಾಧಾನಗೊಳಿಸುತ್ತಿದ್ದಳು. ಇಂದು ರಾಜನಂದಿನಿಯು ಪ್ರಾಣತ್ಯಾಗ ಮಾಡಬೇಕೆಂದು ನಿಶ್ಚಯಿಸಿ, ಅವಳನ್ನು ಕುರಿತು—''ಅಕ್ಕಾ, ಇನ್ನೇತರ ಆಶೆಯಿರುವದು? ನನ್ನ ಸಂಕಟನಿವಾರಕರಾದ ರಾಜಕುಮಾರರು ಇದುವರೆಗೂ ಬರಲಿಲ್ಲ. ಅವರು ದುಷ್ಟರ ಖಡ್ಗಗಳಿಗೆ ಆಹುತಿಯಾಗಿರಬಹುದೇನು? ಒಂದುವೇಳೆ ಹಾಗೆ ಆಗಿದ್ದರೆ ನಾನು ಜೀವಿಸಿದ್ದು ಫಲವೇನು? ಈ ದುಷ್ಟರಾದ ಕಳ್ಳರಿಂದ ನನ್ನ ಅವಮಾನವಾದರೆ ಗತಿಯೇನು? ಆದ್ದರಿಂದ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ'' ಎನ್ನಲು,

''ತಂಗೀ, ಎಂಥ ಹುಚ್ಚಿಯವ್ವಾ ನೀನು! ಆತ್ಮಹತ್ಯೆಮಾಡಿಕೊಳ್ಳುವದೆಂದರೆ ನಿನಗೆ ಕೈಯೊಳಗಿನ ಮಾತಾಗಿದೆ. ಈ ಮನುಷ್ಯ ಜನ್ಮವು ನಮ್ಮ ಪೂರ್ವಸುಕೃತದಿಂದ ಲಭಿಸಿದೆ. ಈ ಜನ್ಮದಲ್ಲಿದ್ದು ಏನಾದರೂ ಪುಣ್ಯದಾಯಕವಾದ ಕೆಲಸವನ್ನು ಮಾಡಿದರೆ ನಮ್ಮ ಜನ್ಮದ ಸಾಫಲ್ಯವಾದಂತಾಯಿತು. ಇದು ನಿಜವೋ ಸುಳ್ಳೋ?''

''ಸುಳ್ಳು ಹೇಗಾದೀತು? ಆದರೆ ಅಕ್ಕಾ, ನಾನೇನು ಅಲ್ಲದ ಕೆಲಸಕ್ಕೆ ಕೈ ಹಾಕಿರುವೆನು ಹೇಳು? ನನ್ನ ಈ ದೇಹವನ್ನು ಒಬ್ಬರಿಗೆ ಒಪ್ಪಿಸಿದ ಮೇಲೆ ಅದರಲ್ಲಿ ಪರಪುರುಷರಿಗೆ ಸ್ಥಳ ದೊರೆಯಲು ಶಕ್ಯವಿದೆಯೇ? ಅದರಂತೆ ನಾನು ನನ್ನ

ಈ ದೇಹವನ್ನು ಆ ಕಳ್ಳರಿಂದ ಅಪವಿತ್ರ ಮಾಡಗೊಡದೆ ಆತ್ಮಹತ್ಯೆ ಮಾಡಿಕೊಳ್ಳ ಬೇಕೆನ್ನುತ್ತೇನೆ''.

"ಒಂದುವೇಳೆ ರಾಜಪುತ್ರನು ಜೀವದಿಂದಿದ್ದರೆ?''

"ಒಳಿತೇ ಆಯಿತು. ಅವನು ನಮ್ಮನ್ನು ನಿಶ್ಚಯವಾಗಿ ಬಿಡಿಸುವನು. ಆದರೆ ಕಳ್ಳರ ಯಜಮಾನನು ನಮ್ಮ ಅವಮಾನ ಮಾಡಿದರೆ?''

"ತಂಗೀ, ಅದರ ಚಿಂತೆಯನ್ನು ಮಾಡಬೇಡ. ನಾನು ಆ ದುಷ್ಟನಿಗೆ ಉಪದೇಶ ಮಾಡಲು ಸಮರ್ಥಳಿರುವೆನು. ಅದಕ್ಕೂ ಅವನು ದಾರಿಗೆ ಬರ ದಿದ್ದರೆ ಇಗೋ, ಇಲ್ಲಿ ನೋಡು. ಇಲ್ಲಿ ಕಾಣುವ ಈ ಹದನವಾದ ಖಡ್ಗದಿಂದ ಅವನ ಹೊಟ್ಟೆಯನ್ನು ಹರಿದು, ಅವನಿಗೆ ತಕ್ಕಶಿಕ್ಷೆಯನ್ನು ಮಾಡುವೆನು.

ರಾಜನಂದಿನಿಯು ಇದರಿಂದ ಬಹಳ ಸಮಾಧಾನ ಹೊಂದಿದಳು. ಅವ ಳಿಗೆ ಆ ರಾಜಪುತ್ರಿಯಲ್ಲಿದ್ದ ಖಡ್ಗವನ್ನು ನೋಡಿ ಸಮಾಧಾನವಾಯಿತು. ಅವಳು ಸೌರಾಷ್ಟ್ರ ರಾಜಪುತ್ರಿಯನ್ನು ಕುರಿತು—"ಅಕ್ಕಾ, ನಿನ್ನಲ್ಲಿಯ ಆತ್ಮ ಸಂರಕ್ಷಣೆಯ ಶಕ್ತಿಯನ್ನು ನೋಡಿ ನನಗೆ ಬಹಳ ಸಮಾಧಾನವಾಗುತ್ತದೆ. ನನಗೂ ನನ್ನ ತಂದೆಯು ಈ ಯುದ್ಧ ವಿದ್ಯೆಯನ್ನು ಕಲಿಸಿದ್ದರೆ ನಾನು ಆತ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದೆನು. ಮತ್ತು ರಾಜಪುತ್ರನಿಗೆ ಕೂಡ ನನ್ನಿಂದ ಸಹಾಯವಾಗುತ್ತಿತ್ತು.'' ಎಂದಳು.

"ತಂಗೀ, ನಿನಗೆ ಶಸ್ತ್ರಾಸ್ತ್ರವಿದ್ಯೆ ಕಲಿಸದಿರುವದಕ್ಕೆ ನಿಮ್ಮ ತಂದೆ ದುರ್ಲಕ್ಷಿಸಿದ್ದು ತಪ್ಪು. ಶಸ್ತ್ರವಿದ್ಯೆಯು ಸ್ತ್ರೀಯರಿಗೆ ಉಪಯೋಗವಿಲ್ಲೆಂದು ಆತನು ತಿಳಿದಿರಬಹುದು. ಕಮಲೇ, ದುಷ್ಟರು ನಮ್ಮ ಮಾನಭಂಗ ಮಾಡ ಬಂದರೆ ಅವರನ್ನು ಯಮಸದನಕ್ಕಟ್ಟಿ ನಮ್ಮ ಮಾನರಕ್ಷಣೆ ಮಾಡಿಕೊಳ್ಳಲು ಶಸ್ತ್ರವಿದ್ಯೆಯನ್ನು ಕಲಿಯುವದು ತಪ್ಪಾಗಬಹುದೆ? ಇಲ್ಲವೆ ನಮ್ಮ ಪತಿಯ ಮೇಲೆ ಯಾವದಾದರೊಂದು ಸಂಕಟ ಬಂದರೆ ಅದನ್ನು ನಿವಾರಿಸಲು ನಮ್ಮ ಪ್ರಿಯನಿಗೆ ನೆರವಾಗುವದಕ್ಕೆ ಶಸ್ತ್ರವಿದ್ಯೆಯನ್ನು ಕಲಿಯುವದು ಅನ್ಯಾಯವಾಗಬಹುದೆ?''

ರಾಜನಂದಿನಿಯ ದುಃಖವು ಈ ಅನ್ಯ ವಿಷಯದಿಂದ ಸ್ವಲ್ಪ ಕಡಿಮೆ ಯಾಯಿತೆಂಬದು ಆ ಚಾಣಾಕ್ಷಳಿಗೆ ಕಂಡುಬಂದಿತು. ಆದ್ದರಿಂದ ಅವಳು ಅದೇ ವಿಷಯವನ್ನೇ ಮುಂದೆ ಸಾಗಿಲು ಯತ್ನಿಸ ಹತ್ತಿದಳು.

"ಅಕ್ಕಾ, ನಿನ್ನ ಮಾತು ನಿಜವಾಗಿರುವದು. ಸ್ತ್ರೀಯರಿಗೆ ಶಿಕ್ಷಣವು

ಬೇಕು. ಅದಿಲ್ಲದಿದ್ದರೆ ಸಂಸಾರವಾಗಲಿ, ನಮ್ಮ ಸಂಕಟನಿವಾರಣೆಯಾಗಲಿ ಆಗಲಾರದು ಇದು ನನ್ನ ತಂದೆಗೆ ಮೊದಲೇ ತಿಳಿದಿದ್ದರೆ ನನಗೆ ಅವನು ಕಲಿಸದೆ ಬಿಡುತ್ತಿದ್ದಿಲ್ಲ.'' ಎಂದು ರಾಜನಂದಿನಿಯು ನುಡಿದಳು.

ಈ ಮೇರೆಗೆ ಅವರಲ್ಲಿ ಸಂಭಾಷಣ ನಡೆಯಲು ಅವರಿಬ್ಬರೂ ಇಲ್ಲಿಂದ ಪಾರಾಗುವ ಹಂಚಿಕೆಯನ್ನು ಹುಡುಕೋಣ ಎಂದು ನಿಶ್ಚಯಿಸಿದರು.

ರಾಜಕುವರಿಯರೀರ್ವರೂ ಎದ್ದು ಸುತ್ತಲೂ ತಿರುಗಹತ್ತಿದರು. ಆದರೆ ಅವರಿಗೆ ಪಾರಾಗಲಿಕ್ಕೆ ಒಂದೂಮಾರ್ಗವು ಸಿಗಲಿಲ್ಲ. ಅವರು ಬಹಳ ಕಷ್ಟಬಟ್ಟರು. ಆ ಗುಹೆಯು ಉಪವನವು ಕೇವಲ ಸುಖದ ಸ್ಥಾನವಾಗಿರದೆ, ಪರಸ್ತ್ರೀಯರನ್ನು ಬಂಧಿಸಿಡುವ ಕಾರಾಗೃಹವಾಗಿತ್ತು. ಆ ಉಪವನದ ಹೊರಗೆ ಹೋಗಲು ಒಂದೇ ಮಾರ್ಗವಿತ್ತು. ಆದರೆ ಆ ಬಾಗಿಲವನ್ನು ದಾಟಿ ಹೋದ ಮೇಲೆ ದಾರಿಯೇ ಸಿಗುತ್ತಿದ್ದಿಲ್ಲ. ಬಾಗಿಲೆದುರಿಗೇ ಗಗನಚುಂಬಿತವಾದ ವೃಕ್ಷಗಳು ಬೆಳೆದುಬಿಟ್ಟಿದ್ದರಿಂದ ಹೊಸಬರಿಗೆ ಆ ಬಾಗಿಲಿನಿಂದ ಹೊರಗೆ ಹೋಗಲಿಕ್ಕೇ ಬರುತ್ತಿದ್ದಿಲ್ಲ. ಆದ್ದರಿಂದ ಅವರೀರ್ವರೂ ರಾಜಕುವರಿಯರು ಪಾರಾಗುವ ಹಂಚಿಕೆಯನ್ನು ಕಾಣದೆ ಒಂದು ಲತಾಮಂಟಪದಲ್ಲಿ ಚಿಂತಾಗ್ರಸ್ತರಾಗಿ ಕುಳಿತುಕೊಂಡರು.

ಅವರನ್ನು ಶಾಂತಗೊಳಿಸುವದಕ್ಕಾಗಿ ಕಾರಂಜಿಗಳೇನೊ ಪುಟನೆಗೆದು ಹಾರುತ್ತಿದ್ದವು. ಮಲ್ಲಿಕಾ-ಕುಸುಮಗಳು ಸುಗಂಧವನ್ನು ಬೀರುತ್ತಿದ್ದವು. ರಾಜಹಂಸಗಳು ತಂಗೊಳದಲ್ಲಿ ಕ್ರೀಡಿಸುತ್ತಿದ್ದವು. ಆದರೇನು? ಅವರನ್ನು ಶಾಂತಗೊಳಿಸುವ ವಸ್ತುವೇ ಬೇರಿದೆ! ಅದನ್ನು ಬಿಟ್ಟು ಉಳಿದ ಸಾಧನಗಳಿಂದ ಅವರ ಮನಸ್ಸು ಶಾಂತಗೊಳ್ಳಬಹುದೆ?

ತುಸಹೊತ್ತಿನ ವರೆಗೆ ಆ ತರುಣಿಯರು ಸುಮ್ಮನೆ ಕುಳಿತರು. ಆಗ ಅವರ ಮುಂದಿನ ಬಾಗಿಲಿನಿಂದ ಓರ್ವಪುರುಷನು ಬಂದನು. ಅವನು ಸರಾಸರಿ ೨೮-೨೯ ವರ್ಷದವನಿದ್ದು, ಒಳ್ಳೇ ಹುರಿಯಾದ ಮೈಕಟ್ಟಿನವನಿದ್ದನು. ತೊಳೆದ ಕೆಂಡದಂತಿದ್ದ ಅವನ ಮೈಬಣ್ಣವೂ, ದೋಸೆಯಂತಿದ್ದ ಅವನ ಮುಖವೂ ನೋಡುವವರಿಗೆ ಒಳ್ಳೇ ಭೀತಿಯನ್ನುಂಟುಮಾಡುತ್ತಿದ್ದವು. ಸುರಾದೇವಿಯು ತನ್ನ ಅಮೃತಹಸ್ತವನ್ನು ಅವನ ತಲೆಯ ಮೇಲೆ ಇಟ್ಟದ್ದರಿಂದಲೋ ಮತ್ತಾವಕಾರಣದಿಂದಲೋ ಅವನ ಕಣ್ಣುಗಳು ಕಿಡಿಗಳನ್ನು ಕಾರುವಂತೆ ಭಾಸವಾಗುತ್ತಿತ್ತು.

ಕಾಡಾನೆಯ ಕೋರೆಗಳಂತಿದ್ದ ಅವನ ಹಲ್ಲುಗಳು ಅವನ ಮೋರೆಯ ಉಗ್ರತೆಯನ್ನು ಮತ್ತಿಷ್ಟು ಹೆಚ್ಚಿಸುತ್ತಿದ್ದವು. ಅವನ ಮೈಮೇಲೆ ಸಾಧಾರಣ ತರದ ಅರಿವೆಗಳಿದ್ದವು.

ಇಂಥ ಅಕರಾಳ-ವಿಕರಾಳ ಪುರುಷನನ್ನು ನೋಡಿ ರಾಜನಂದಿನಿಯು ಬೆದರಿದಳು. ಇವನು ಕಳ್ಳರ ನಾಯಕನೆಂದು ಅವಳಿಗೆ ಕೂಡಲೇ ಹೊಳೆಯಿತು. ಆಗ ಅವಳು ಭೀತಿಯಿಂದ ರಾಜಕುವರಿಯ ಬೆನ್ನ ಹಿಂದೆ ನಿಂತು—"ಅಕ್ಕಾ, ಈ ದುಷ್ಟನಿಂದ ನನ್ನನ್ನು ರಕ್ಷಿಸು!" ಎಂದು ಒದರಿದಳು.

ಸೌರಾಷ್ಟ್ರರಾಜಪುತ್ರಿಯು ಕಮಲೆಗೆ ಧೈರ್ಯವ ಹೇಳುತ್ತ ಒಳ್ಳೇ ಗಂಭೀರಮುದ್ರೆಯಿಂದ, ತಾನು ಸ್ಥಳಬಿಟ್ಟು ಕದಲದೆ ಕುಳಿತುಕೊಂಡಿದ್ದಳು. ಆ ಮೂರ್ಖನ ಕಡೆಗೆ ಸಹ ನೋಡಬಾರದೆಂದು ಅವಳು ಮನದಲ್ಲಿ ಮಾಡಿದಂತೆ ತೋರುತ್ತಿತ್ತು.

ಯಮಸದೃಶನಾದ ಆ ಪುರುಷನು ಸೌರಾಷ್ಟ್ರ ರಾಜಪುತ್ರಿಯ ಹತ್ತಿರಕ್ಕೆ ಬಂದನು; ಮತ್ತು ಮೊಣಕಾಲೂರಿ:-"ತರುಣೀ," ಎಂದು ಒದರಿದನು.

ರಾಜಪುತ್ರಿಯು ತಾನು ಕುಳಿತ ಸ್ಥಳದಿಂದ ಕದಲಲಿಲ್ಲ. ಹಾಗು ಅವನ ಕಡೆಗೆ ಸಹ ನೋಡದೆ ಸುಮ್ಮನೆ ಕುಳಿತಳು.

ಪುನಃ ಆ ಪುರುಷನು:-"ರಾಜಕುವರೀ, ಇತ್ತ ಹೊರಳಿ ನನ್ನನ್ನು ನೋಡು; ನಿನ್ನ ಸುಂದರವಾದ ಮುಖವನ್ನು ನೋಡಿ ನನ್ನ ನಯನಗಳು ಧನ್ಯವಾಗಲಿ!" ಎಂದು ನುಡಿದನು.

ರಾಜಕುವರಿಯು ಆ ಮಾತುಗಳನ್ನು ಕೇಳಿ ಸ್ವಲ್ಪ ನಕ್ಕಳು ಮಾತ್ರ.

ಅವನು ಸ್ವಲ್ಪ ಸಿಟ್ಟಿನಿಂದ:—"ಏನು? ನಾನು ಇಷ್ಟು ಮಾತಾಡಿಸಿದರೂ ನೀನು ನನ್ನ ಸಂಗಡ ಮಾತಾಡುವದಿಲ್ಲವೆ? ಆ ರಾಜನಂದಿನಿಯನ್ನು ಕೂಡ ನನ್ನ ಬಳಿಗೆ ಕಳಿಸುವದಿಲ್ಲವೆ? ನನ್ನಂಥ ಸಂಪತ್ತಿನ ಖನಿಯು ನಿಮಗೆಲ್ಲಿ ದೊರೆತೀತು? ನೀವು ನಿರಾಯಾಸವಾಗಿ ನನ್ನ ಕೈವಶವಾದರೆ ನಿಮ್ಮ ಕೈಕೆಳಗೆ ಸಾವಿರಾರುಜನ ಸೇವಕರು ಕೈಕಟ್ಟಿಕೊಂಡು ಸೇವೆಮಾಡಲು ಸಿದ್ಧರಾಗುವರು. ನಿಮಗೆ ಏನೂ ಕೊರತೆಯಾಗುವದಿಲ್ಲ."

ರಾಜಕುಮಾರಿಯು ಪುನಃ ನಕ್ಕಳು. ಅವಳ ಆ ನಗೆಯಲ್ಲಿ ಆ ಮನುಷ್ಯನ ವಿಷಯಕವಾಗಿ ತುಂಬಾ ತಿರಸ್ಕಾರವು ಇದ್ದಂತೆ ತೋರಿತು.

ಅವನು ಮತ್ತಿಷ್ಟು ಸಮೀಪದಲ್ಲಿ ಬಂದನು; ಮತ್ತು ಅವಳನ್ನು ಕುರಿತು:- 'ರಮಣೀಮಣೀ, ಬ್ರಹ್ಮನು ಈ ಸೃಷ್ಟಿಯಲ್ಲಿ ನಿನ್ನಂಥ ಸುಂದರ ವಸ್ತುಗಳನ್ನು ಏತಕ್ಕೆ ಇಟ್ಟಿರುವನೆಂದು ತಿಳಿದಿರುವೆ? ಅವು ನಮ್ಮಂಥ ಪುರುಷರ ಸುಖೋಪ ಭೋಗಕ್ಕಾಗಿ. ನೀನು ಎಷ್ಟು ಬಡಿವಾರ ಮಾಡಿದರೇನು? ಇನ್ನು ಈ ಸ್ಥಳ ವನ್ನು ಬಿಟ್ಟು ನೀವು ಕದಲಲಾರಿರಿ. ನೀವು ನಿಮ್ಮ ಸಂತೋಷದಿಂದ ನನ್ನ ವಶ ವಾದರೆ ನಿಮ್ಮ ಭಾಗ್ಯಕ್ಕೆ ಎಣೆಯೇ ಇಲ್ಲ. ಇಲ್ಲದಿದ್ದರೆ ನಿಮ್ಮನ್ನು ಬಲಾತ್ಕರಿಸದೆ ಬಿಡೆನು."

ಅವನ ಮಾತುಗಳನ್ನು ಕೇಳಿ ಸೌರಾಷ್ಟ್ರ ರಾಜಪುತ್ರಿಯು ಅವನ ಕಡೆಗೆ ಸ್ವಲ್ಪ ತಿರುಗಿ:—"ಶ್ರೀಮಂತನೇ, ನಿನ್ನ ಮಾತುಗಳೇ ನನಗೆ ತಿಳಿಯದಾಗಿವೆ. ನಿನ್ನನ್ನು ನೋಡಲು, ನೀನೊಬ್ಬ ಸಿರಿವಂತನೂ, ಯೋಗ್ಯನೂ ಆದ ಮನುಷ್ಯ ನಂತೆ ತೋರುವಿ. ಆದರೆ ನಿನ್ನ ಈ ದುಷ್ಟ ವಿಚಾರಗಳನ್ನು ನೋಡಿ ನನಗೆ ತುಂಬಾ ಕನಿಕರವುಂಟಾಗುತ್ತದೆ. ಈಗಾದರೂ ಈ ದುಷ್ಟ ವಿಚಾರವನ್ನು ಬಿಟ್ಟುಬಿಡು, ಪರಸ್ತ್ರೀಯರ ಸತೀತ್ವಭಂಗ ಮಾಡುವದರಿಂದ ನಿನಗೆ ಹಿತವಾಗ ಲಾರದು. ದೇವರು ನಿನ್ನ ಕೆಲಸಕ್ಕೆ ಮೆಚ್ಚಲಾರನು" ಎಂದು ನುಡಿದಳು.

ಇದನ್ನು ಕೇಳಿ ಅವನು:—"ತರುಣೀ, ಈ ಬೋಧವನ್ನು ಯಾರ ಸಲು ವಾಗಿ ಮಾಡುವಿ? ಪ್ರಸ್ತುತದಲ್ಲಿ ಕಾಮಾಂಧನಾದ ನನಗೆ ನಿನ್ನ ಹಿತೋಪದೇಶ ದಿಂದ ಏನಾಗಬೇಕಾಗಿದೆ? ಪುರುಷರ ಮನಸ್ಸನ್ನು ತೃಪ್ತಿಪಡಿಸಬಾರದೆಂದಿದ್ದರೆ ಆ ವಿಧಾತನು ನಿಮ್ಮಂಥ ತರುಣಿಯರನ್ನು ಈ ವಿಶ್ವದಲ್ಲಿ ಸೃಷ್ಟಿಸುತ್ತಲೇ ಇರಲಿಲ್ಲ.

ಆ ಕಾಮುಕನು ಸುರಾಪಾನದಿಂದ ಉನ್ಮತ್ತನಾಗಿ ಹೋಗಿದ್ದನು. ಅವ ನಿಗೆ ದೇಹಭಾನವೇ ಇದ್ದಂತೆ ತೋರಲಿಲ್ಲ. ರಾಜಪುತ್ರಿಗೆ ಆ ದುಷ್ಟನಕೈಯಿಂದ ಪಾರಾಗುವದು ಬಹು ತೊಂದರೆಯೆನಿಸಿತು. ಅವಳು ಒಹಳವಾಗಿ ಯೋಚಿಸಿ, ಅವನನ್ನು ಕುರಿತು:—"ಸರದಾರ, ನಿಮ್ಮ ಮಾತು ನಿಜವದೆ! ನೀವಂದಂತೆ ಸ್ತ್ರೀ-ಯರು ಪುರುಷರ ಸುಖೋಪಭೋಗದ ವಸ್ತುಗಳು."

"ಈ ಮಾತನ್ನು ನಾನು ನಿನಗೆ ಮೊದಲೇ ಹೇಳಲಿಲ್ಲವೇ?" ಎಂದು ಅವನು ನುಡಿದನು.

"ಹಾಗಾದರೆ ಈಗ ಮಾಡತಕ್ಕದ್ದೇನು?"

"ನಿನ್ನ ಮೃದುವಾದ ಕರಗಳಿಂದ ಒಂದು ಪಾತ್ರೆಯಲ್ಲಿ ಸುರೆಯನ್ನು

ತಕ್ಕೊಂಡು ಬಾ. ಅದನ್ನು ಕುಡಿದು ನಾನು ಆನಂದಿತ ನಾಗುತ್ತೇನೆ.''

''ತರುಣಿಯು (ಮನದಲ್ಲಿ ನಕ್ಕು) ಅಲ್ಲಿಂದೆದ್ದಳು. ಮತ್ತು ಸುರೆಯನ್ನು ತರುತ್ತೇನೆ ಎಂದಳು.

ಆ ಕಾಮುಕನು 'ಹಾಗೆಯೇ ಆಗಲೆಂ'ದನು. ಕೂಡಲೇ ಆಕೆಯು ರಾಜನಂದಿನಿಯನ್ನು ಕರಕೊಂಡು ಆ ಬಾಗಿಲಬಳಿಗೆ ಹೋದಳು. ಮತ್ತು ಅವಳ ಕಿವಿಯಲ್ಲಿ ಏನೇನೋ ಹೇಳಿ, ಆ ಕಳ್ಳನು ಮೊದಲು ಬಂದ ಕಳ್ಳ ದ್ವಾರದಿಂದ ಅವಳನ್ನು ಕಳಿಸಿದಳು. ಆಮೇಲೆ ಅವನೆಡೆಗೆ ಬಂದು—''ಸರದಾರ, ನಿಮಗೆ ನಾನೊಂದು ಮಾಲೆಕಟ್ಟಿ ಕೊಡಬೇಕೆಂದಿದ್ದೇನೆ.'' ಎಂದಳು. ಅದಕ್ಕವನು ಸಮ್ಮತಿಸಿದನು. ಕೂಡಲೆ ಅವಳು ಅಡವಿಯ, ನಿರ್ಗಂಧಕುಸುಮಗಳ ಹರಕುಮುರುಕಾದ ಒಂದು ಮಾಲೆಯನ್ನು ಕಟ್ಟಿ ಅವನ ಮುಂದೆ ಇಟ್ಟಳು. ಬಳಿಕ ಅವಳು ಅವನನ್ನು ಕುರಿತು—''ಸರದಾರ, ಸುರೆಯನ್ನು ತರಹೋದವಳು ಇನ್ನೂ ಬರಲಿಲ್ಲ. ಬಹಳ ಹೊತ್ತಾಯಿತು. ಆದ್ದರಿಂದ ನಾನು ಹೋಗಿ ಸುರೆಯನ್ನು ತರುತ್ತೇನೆ'' ಎಂದಳು.

ಅದಕ್ಕವನು ಸಮ್ಮತಿಸಿದನು. ರಾಜಪುತ್ರಿಯು ಹೊರಟು ಹೋದಳು. ಆಕೆಯು ರಾಜನಂದಿನಿಯ ಸಹಾಯದಿಂದ ಹಿಂದಿನಿಂದ ಬಂದು ಖಡ್ಗಪ್ರಹಾರದಿಂದ ಆ ನೀಚನನ್ನು ಗೊತ್ತಿಗೆಹಚ್ಚಬೇಕೆಂದು ನಿರ್ಧರಿಸಿದಳು.

ಹೀಗೆ ರಾಜಪುತ್ರಿಯು ಯೋಚಿಸುತ್ತಿರಲು ಇತ್ತ ಆ ಮನುಷ್ಯನು ಒಳ್ಳೇ ಆನಂದದಿಂದ—''ಅಹಾ! ಈ ರಾಜಪುತ್ರಿಯರು ಇಷ್ಟು ಬೇಗನೆ ನನ್ನ ಕೈವಶವಾಗುತ್ತಿದ್ದರೆಂಬದು ನನ್ನ ಕನಸು-ಮನಸಿಲ್ಲಿ ಕೂಡ ಇರಲಿಲ್ಲ. ಆದರೆ ಹಿರಿಯ ರಾಜಪುತ್ರಿಯು ಬಹು ಚಾಣಾಕ್ಷಳಿದ್ದಂತೆ ತೋರುತ್ತದೆ. ಆದ್ದರಿಂದಲೇ ಅವಳು ತಾನಾಗಿಯೇ ನನ್ನ ವಶವಾಗಲು ಒಪ್ಪಿರುವಳು. ಒಪ್ಪದೆ ಏನು ಮಾಡಿಯಾಳು? ಅವಳಿಗೆ ಪಾರಾಗುವ ಆಶೆಯಾದರೂ ಎಲ್ಲಿಯದೆ? ಒಳಿತಾಯಿತು. ಇನ್ನು ಈ ಕುವರಿಯರಿಗೆ ಯಾವ ಬಗೆಯ ತೊಂದರೆಯಾಗದಂತೆ ವ್ಯವಸ್ಥೆಯನ್ನಿಡಬೇಕು! ಇಲ್ಲಿಯೊಂದು ದೊಡ್ಡ ಪ್ರಾಸಾದವನ್ನೇ ಕಟ್ಟಿಸಿ, ಇದನ್ನು ಇಂದ್ರನಭವನವನ್ನಾಗಿ ಮಾಡುವೆನು'' ಎಂದು ಏನೇನೋ ಆಲೋಚಿಸಹತ್ತಿದನು.

ಆ ಮನುಷ್ಯನು ಸುರಾಪಾನದಿಂದ ಉನ್ಮತ್ತನಾದ್ದರಿಂದ ಅವನಿಗೆ ಅಲ್ಲಿದ್ದ ಯಾವ ವಸ್ತುಗಳ ಮೇಲೂ ಲಕ್ಷ್ಯವಿದ್ದಿಲ್ಲ. ಅದೇ ಸಮಯದಲ್ಲಿ ಅವರೀರ್ವರೂ

ರಾಜಕುಮಾರಿಕೆಯರು ಮೆಲ್ಲಗೆ ಅವನ ಹಿಂದೆ ಬಂದರು. ಸೌರಾಷ್ಟ್ರ ರಾಜಪುತ್ರಿಯು ಮುಚ್ಚಿತಂದಿದ್ದ ಖಡ್ಗವನ್ನು ಹೊರದೆಗೆದಳು. ಆಕೆಯು ಇನ್ನು ಆ ಖಡ್ಗವನ್ನು ಅವನ ಮೇಲೆ ಪ್ರಯೋಗಿಸತಕ್ಕವಳು! ಅಷ್ಟರಲ್ಲಿ ಅವನು ಹೊರಳಿ ನೋಡಿದನು. ಅವನು ಕೂಡಲೇ ಎದ್ದು ನಿಂತು, ರಾವಜಕುವರಿಯ ಮೇಲೇರಿ ಸಾಗಿದನು. ರಾಜಕುವರಿಯು ಸಾವಧಳಾಗಿದ್ದು ಇನ್ನು ತಡಮಾಡುವದು ವಿಹಿತವಲ್ಲೆಂದು ಅವನ ರುಂಡವನ್ನು ಧಡದಿಂದ ಬೇರೆ ಮಾಡಬೇಕೆಂದು ಅವನ ಮೇಲೆ ಖಡ್ಗವನ್ನು ನೆಗವಿದಳು. ನಾಯಕನು ಹಲ್ಲುದವಡಿ ಕಚ್ಚುತ್ತ "ಹಾ ದುಷ್ಟೇ ನನ್ನನ್ನು ಕೊಲ್ಲಬರುವೆಯಾ" ಎಂದು ಗದ್ದರಿಸುತ್ತ ಆಕೆಯ ಕೈಯನ್ನು ಹಿಡಿಯಹೋದನು. ಅಷ್ಟರಲ್ಲಿ ಇಬ್ಬರು ಆಗಂತುಕರು ಆ ಗುಹೆಯನ್ನು ಪ್ರವೇಶಿಸಿದರು. ರಾಜಪುತ್ರಿಯರು ಇದೊಂದು ಹೊಸಸಂಕಟ ಬಂದಿತೆಂದು ತಿಳಿದು ಹೆದರಿದರು. ತತ್‌ಕ್ಷಣದಲ್ಲಿ ಆ ಇಬ್ಬರೂ ಕ್ಷಾತ್ರವೀರರು ತಮ್ಮ ಖಡ್ಗಗಳನ್ನು ಝಳಪಿಸುತ್ತ ರಾಜಕುವರಿಯರ ಮುಂದೆ ಬಂದು ನಿಂತರು. ಹತ್ತರ ಬಂದ ಬಳಿಕ ಅವರನ್ನು ನೋಡಿದ ಕೂಡಲೇ ರಾಜನಂದಿನಿಯ ಮುಖವು ಚಂದ್ರನನ್ನು ನೋಡಿದ ಕಮಲಿನಿಯಂತೆ ಒಳ್ಳೇ ಆಲ್ಹಾದಪೂರ್ಣವಾಯಿತು. ಅವಳು ಕೂಡಲೇ ಅವರಲ್ಲಿಯ ರಾಜಪುತ್ರನಾದ ರತ್ನಾಕರನನ್ನು ಗುರುತಿಸಿ, ಅವನನ್ನು ಆದರದಿಂದ ಕರತಂದಳು. ಆಗ ಸೌರಾಷ್ಟ್ರ ರಾಜಕುವರಿಗೂ ಆನಂದವಾಯಿತು.

ಇದನ್ನು ನೋಡಿ ಕಳ್ಳರ ನಾಯಕನು ಬಹಳ ಸಂತಾಪಗೊಂಡನು. ಅವನು ಭಯಂಕರವಾದ ಸಿಟ್ಟಿನಿಂದ ರಾಜಪುತ್ರಿಯನ್ನು ಹಿಡಿದೆಳೆಯಲು ಕೈಚಾಚಿದನು. ಕೂಡಲೆ ರಾಜಕುಮಾರನು ಅವನ ಆ ಹಸ್ತವನ್ನು ತುಂಡರಿಸಿದನು. ಮತ್ತು ಅವನನ್ನು ಕುರಿತು—ದುಷ್ಟಾ, ಪರಸ್ತ್ರೀಯರನ್ನು ಅಪಹರಿಸುವದೇ ನಿನ್ನ ಕೆಲಸವಾಗಿದೆಯೇನು? ನಿನ್ನ ಈ ಪಾಪೀದೇಹವನ್ನು ಒಂದು ಕ್ಷಣ ಸಹ ಈ ಭೂಮಿಯ ಮೇಲೆ ಇರಗೊಡುವದು ನನ್ನಂಥ ಕ್ಷಾತ್ರವೀರನಿಗೆ ಅನುಚಿತವು! ಆದ್ದರಿಂದ ಈಗಿಂದೀಗಲೆ ನಿನ್ನನ್ನು ಯಮಸದನಕ್ಕಟ್ಟುವೆನು, ಎಂದು ನುಡಿದನು.

ಅದನ್ನು ಕೇಳಿ ಆ ಮನುಷ್ಯನ ಎದೆಗೆ ಸಿಡಿಲು ಬಡಿದಂತಾಯಿತು. ಅವನ ಸುರೆಯ ಮದವು ಎತ್ತೋ ಅಡಗಿ ಹೋಯಿತು. ಅವನು ಮೊಳಕಾಲೂರಿ ರಾಜಪುತ್ರನ ಕಾಲುಗಳ ಮೇಲೆ ಹೊರಳಾಡಹತ್ತಿದನು. ಮತ್ತು ಅವನನ್ನು ಕುರಿತು—ವೀರನೇ, ನನ್ನನ್ನು ಕ್ಷಮಿಸು. ನಾನಿನ್ನು ಇಂಥ ಕೆಲಸವನ್ನು

ಮಾಡುವದಿಲ್ಲ, ಎಂದನು.

ಆಗ ಸೌರಾಷ್ಟ್ರ ರಾಜಕುಮಾರಿಯು—ಮೂರ್ಖಶಿರೋಮಣಿಯೇ, ಇನ್ನೂ ನಿನಗೆ ಜೀವವು ಬೇಕಾಗಿದೆಯೇ? ಜೀವದಿಂದಿದ್ದು ಇನ್ನೂ ಎಷ್ಟು ಅನರ್ಥಗಳನ್ನು ಮಾಡಬೇಕೆಂದಿರುವೆ? ಎಷ್ಟು ಜನ ದಾರಿಕಾರರನ್ನು ಕೊಲ್ಲ ಬೇಕೆಂದಿರುವೆ? ಅಡವಿಯ ಪಾಲಾದ ನನ್ನನ್ನು ಎಳತಂದು ಈ ನರಕರೂಪ ವಾದ ಕಾರಾಗೃಹದಲ್ಲಿರಿಸಿದೆ! ನನ್ನನ್ನು ತಂದ ಮೇಲೆ ಈ ರಾಜಕುಮಾರಿಯನ್ನು ತಂದೆ! ಇಂಥ ಕಾಮುಕನೂ, ಪಾಪಿಯೂ ಆದ ನೀನು ಜೀವದಿಂದುಳಿದರೆ ಎಷ್ಟು ಅನರ್ಥ ಮಾಡುವಿಯೋ ಏನೋ! ಆದ್ದರಿಂದ ಮೊದಲು ನಿನ್ನನ್ನು ಯಮ ಸದನಕ್ಕಟ್ಟಲೇಬೇಕು, ಎಂದಳು.

ಹುಟ್ಟಾ ಅಂಜುಬುರುಕನಾದ ಆ ನರಪಿಶಾಚಿಗೆ ಕ್ಷಾತ್ರತೇಜಸ್ಸೆಲ್ಲಿಂದ ಬರಬೇಕು? ದಿನಾಲು ದಾರಿಕಾರರನ್ನು ಬಡಿದು ಹೊಟ್ಟೆಹೊರಕೊಳ್ಳುವ ಆ ಅಧಮನಿಗೆ ಆತ್ಮಸಾಮರ್ಥ್ಯವೆಲ್ಲಿಂದ ಬರಬೇಕು? ಯಾವಾಗಲೂ ಸುರಾಪಾನ ದಿಂದ ಸಾಮರ್ಥ್ಯವನ್ನು ಕಳೆದುಕೊಂಡ ಆ ಮೂರ್ಖನು ಯಾವ ಬಲದಿಂದ ಆ ವೀರನೊಡನೆ ಕಾದಲು ಸಮರ್ಥನಾದಾನು? ಅವನು ರಾಜಪುತ್ರನ ಕಾಲುಗಳ ಮೇಲೆ ಉರುಳಾಡುತ್ತ, ಅಳುತ್ತ ತನ್ನನ್ನು ಕೊಲ್ಲಬೇಡವೆಂದು ಹೇಳಿಕೊಳ್ಳ ಹತ್ತಿದನು.

ಸೌರಾಷ್ಟ್ರ ರಾಜಪುತ್ರಿಯ ಮಾತಿನಿಂದ ಇವನು ಆ ಕಳ್ಳರ ನಾಯಕ ನೆಂಬದು ರತ್ನಾಕರನಿಗೆ ಗೊತ್ತಾಗಿಹೋಯಿತು. ಆಗ ಅವನು ಆ ಮನುಷ್ಯ ನನ್ನು ಕುರಿತು—ಎಲೈ, ನೀನಿನ್ನು ಜೀವಿಸಲು ಆಶೆಮಾಡಬೇಡ. ಇನ್ನು ನೀನು ಜೀವಿಸಿದ್ದರೆ, ನಿನ್ನ ಹುಟ್ಟುಗುಣಗಳಾದ ಕಳವು-ದರವಡೆ-ಪರಸ್ತ್ರೀ ಅಪಹರಣ ಗಳನ್ನು ಬಿಡಲಾರೆ. ಇದುವರೆಗೆ ನೀನು ನಿನ್ನ ಯೋಗ್ಯತೆ ಮೀರಿ ಪಾಪಕೃತ್ಯಗಳ ನ್ನಾಚರಿಸಿರುವೆ, ಮತ್ತೆ ಬದುಕಿ, ಇದೇ ಬಗೆಯಾಗಿ ಆಚರಿಸ ಹತ್ತಿದರೆ ಜನ್ಮಾಂತರದಲ್ಲೂ ನೀನು ನಿನ್ನ ಪಾಪದಿಂದ ಮುಕ್ತನಾಗಲಾರೆ. ಈಗ ನಿನ್ನ ದೈವವು ತೆರೆಯಿತು. ನೀನು ಮುಂದೆಮಾಡಬೇಕಾದ ಪಾಪಗಳಿಂದ ನಿವೃತ್ತ ನಾಗುವ ಸುಯೋಗವು ಈಗ ಬಂದೊದಗಿದೆ. ಆದ್ದರಿಂದ ಈಗಾದರೂ ದೇವರ ನಾಮಸ್ಮರಣೆ ಮಾಡು. ನಿನ್ನ ಪಾಪಗಳನ್ನು ಕ್ಷಮಿಸುವದಕ್ಕಾಗಿ ಅವನನ್ನು ಪ್ರಾರ್ಥಿಸು. ಎಂದು ಅವನಿಗೆ ಹೇಳುತ್ತ ಅವನ ರುಂಡವನ್ನು ಧಡದಿಂದ

ಬೇರೆ ಮಾಡಿದನು! ಆಗ ಅವನ ಪಾಪಿಯಾದ ದೇಹವು ಭೂಮಿಯ ಮೇಲೆ ಬಿದ್ದುಬಿಟ್ಟಿತು.

ವಾಚಕರೇ ಸ್ತ್ರೀವಿಷಯವು ಎಷ್ಟು ಭಯಂಕರವಿದೆ ನೋಡಿರಿ. ರಾಜನಂದಿನಿಯನ್ನಪೇಕ್ಷಿಸಿದ ಅಫಗಾನ ರಾಜಪುತ್ರನೂ, ಮಡಿದನು. ಅವನ ವಿಶ್ವಾಸುಕಸೇವಕನೂ ಮರಣಹೊಂದಿದನು. ಈಗ ಕಳ್ಳರ ನಾಯಕನೂ ಅದೇ ಹಾದಿಯನ್ನೇಹಿಡಿದನು. ಆದ್ದರಿಂದಲೇ ತಿಳಿದವರು ಪರಸ್ತ್ರೀ ಹಂಬಲವನ್ನು ಕನಸು ಮನಸಿನಲ್ಲಿಯೂ ತರುವದಿಲ್ಲ.

---

# ೧೩ನೆಯ ಪ್ರಕರಣ—ಭಾವೀಸುಖದ ಕಲ್ಪನೆ.

ಕಳ್ಳರ ನಾಯಕನು ನಾಶವಾದ ಬಳಿಕ ರಾಜನಂದಿನಿಗೆ ಸಂತೋಷವಾಯಿತೆಂಬದನ್ನು ಬೇರೆ ಹೇಳುವ ಕಾರಣವಿಲ್ಲ, ಅದರಂತೆ ಸೌರಾಷ್ಟ್ರ ರಾಜಪುತ್ರಿಗೂ ತುಂಬಾ ಆನಂದವಾಯಿತು. ಆಕೆಯು ಕೃತಜ್ಞತೆಯಿಂದ ರತ್ನಾಕರನನ್ನು ನೋಡಿದಳು. ರಾಜನಂದಿನಿಯು ಹೇಳುತ್ತಿದ್ದ ರಾಜಪುತ್ರನು ಈತನೇ ಆಗಿರಬಹುದೇನೆಂಬ ವಿಚಾರವು ಆಕೆಯಲ್ಲುತ್ಪನ್ನವಾಯಿತು. ಆದರೆ ರಾಜನಂದಿನಿಯು ರಾಜಪುತ್ರನೊಬ್ಬನೇ ಇರುವನೆಂದು ಹೇಳಿದ್ದಳು. ಆದರೆ ಗುಹೆಗೆ ಬಂದ ಆಗಂತುಕ ತರುಣರು ಇಬ್ಬರಿದ್ದದರಿಂದ ಆಕೆಗೆ ದಿಗಿಲು ಬಿದ್ದಿತು. ಆ ಸಮಯದಲ್ಲಿ ರಾಜನಂದಿನಿಯನ್ನು ಕದ್ದುಕೇಳಲಿಕ್ಕೂ ಅವಕಾಶವಿರದ್ದರಿಂದ ಆಕೆಯು ತನ್ನಷ್ಟಕ್ಕೆ ತಾನೇ ತರ್ಕವಿತರ್ಕಗಳನ್ನು ಮಾಡತೊಡಗಿದಳು.

ಆಯತ ಸಮಯಕ್ಕೆ ರಾಜಪುತ್ರನು ಬಂದು ತನ್ನ ಸಂಕಟ ನಿವಾರಣೆ ಮಾಡಿದ್ದಕ್ಕೆ ರಾಜನಂದಿನಿಯು ಬಳ್ಳೇ ಆಶ್ಚರ್ಯಚಕಿತಳಾಗಿದ್ದಳು. ಆಶ್ಚರ್ಯದ ಭರವು ತಗ್ಗಿದ ಬಳಿಕ ಆಕೆಯು ರಾಜಪುತ್ರನ ಕಡೆಗೆ ನೋಡಿ:—ರಾಜಪುತ್ರರೇ, ನಿಮ್ಮ ಸಂಗಡ ಬಂದ ಈ ವೀರನಾರು? ಎಂದಳು. ರಾಜನಂದಿನಿಯ ಈ ಪ್ರಶ್ನೆಯನ್ನು ಕೇಳಿದ ಕೂಡಲೇ ಅಜಯಸಿಂಹನು ನೆಲಮುಟ್ಟಿ ಮುಜುರೆಮಾಡಿ:—ಮಹಾತಾಯಿಯವರೇ, ನಾನು ತಮ್ಮ ತಂದೆಯವರ ಸೇವಕನು. ನನಗೆ ಅಜಯಸಿಂಹನೆನ್ನುತ್ತಾರೆ; ನಾನೊಬ್ಬ ಗುಪ್ತಹೇರನು; ತಮ್ಮನ್ನು ಹುಡುಕುವದ

ದಕ್ಕಾಗಿಯೇ ನಾನು ಈ ಅರಣ್ಯವನ್ನು ಹೊಕ್ಕೆನು. ಹಾದಿಯಲ್ಲಿ ಅಕಸ್ಮಾತ್ತಾಗಿ ರಾಜಪುತ್ರರು ಕೂಡಿದ್ದರಿಂದ ತಮ್ಮ ಸಂಗತಿಯೆಲ್ಲ ತಿಳಿಯಿತು. ಆದ್ದರಿಂದ ಇಬ್ಬರೂ ಕೂಡಿಯೇ ನಿಮ್ಮ ಶೋಧಕ್ಕೆ ತೊಡಗಿದೆವು. ದೇವರು ನಮ್ಮ ಪ್ರಯತ್ನಕ್ಕೆ ಯಶಸ್ಸು ಕೊಟ್ಟನು. ಈದಿನ ನಾವು ಆಯುತ ಹೊತ್ತಿಗೆ ನಿಮ್ಮ ಬಳಿಗೆ ಬರದಿದ್ದರೆ ಕೆಲಸವು ಕಠಿಣವಾಗುತ್ತಿತ್ತು, ಅವ್ವನವರೇ ನಮ್ಮ ರಾಜರ ಪುಣ್ಯವು ಪ್ರಚಂಡವಿದ್ದದರಿಂದ ನೀವು ಈ ರಾಕ್ಷಸರ ಕೈಯೊಳಗಿಂದ ಲೋಕಮಾತೆಯಾದ ಸೀತಾದೇವಿಯಂತೆ ಪಾರಾದಿರಿ. ಇನ್ನು ಚಿಂತೆಯನ್ನು ಬಿಡಿರಿ ಇಲ್ಲಿಂದ ನಮ್ಮ ಮಿಥಿಲಾನಗರವು ಬಹಳ ದೂರಿಲ್ಲ. ಮೂರುನಾಲ್ಕು ದಿನಗಳ ದಾರಿಯಲ್ಲಿದೆ. ಎಂದು ನುಡಿದನು.

ತಂದೆಯ ಸೇವಕನು ಎಂಬ ಶಬ್ದವನ್ನು ಕೇಳಿದ ಕೂಡಲೆ ರಾಜನಂದಿನಿಗೆ ಅಬ್ದುಲ್ಲನ ಮೋಸದ ಕೃತ್ಯವು ಸ್ಮರಣಕ್ಕೆ ಬಂದಿತು. ಆಗ ಅವಳು ಒಮ್ಮೆಲೆ ಆವನ ಮಾತನ್ನು ನಂಬದಾದಳು. ರಾಜಪುತ್ರಿಯು ತನ್ನನ್ನು ಅವಿಶ್ವಾಸಿಸುವ ಳೆಂದು ತಿಳಿದಕೂಡಲೆ ಅಜಯಸಿಂಹನು ಮಿಥಿಲಾನಗರಿಯ ಹಾಗು ರಾಜಮಂದಿರದ ಗುರುತುಗಳನ್ನೆಲ್ಲ ಹೇಳಿದನು. ರಾಜರ ದಿನಚರ್ಯವನ್ನೂ ಹೇಳಿದನು. ದಾಸ ದಾಸಿಯರ ಹೆಸರುಗಳನ್ನೂ ಅಂತಃಪುರದಲ್ಲಿರುವ ರಾಜಪರಿವಾರದ ಹೆಸರುಗಳನ್ನು ಸಹ ಹೇಳಿದನು. ಆತನು ಇಷ್ಟೆಲ್ಲ ಗುರುತುಗಳನ್ನು ಹೇಳಿದ್ದರಿಂದ ರಾಜನಂದಿನಿಯ ಸಂಶಯವು ದೂರಾಯಿತು. ಬಳಿಕ ಆಕೆಯು—ಈ ಅರಣ್ಯದಲ್ಲಿಯೇ ನಾನಿರುವೆನೆಂಬದು ನಿನಗೆ ಹ್ಯಾಗೆ ತಿಳಿಯಿತು? ಎಂದು ಪ್ರಶ್ನಮಾಡಿದಳು. ಅದಕ್ಕೆ ಅಜಯಸಿಂಹನು—ಅವ್ವನವರೇ, ನಿಮ್ಮನ್ನು ಶೋಧಿಸುವದಕ್ಕಾಗಿ ಕಂದಹಾರದ ಕಡೆಗೆ ನಮ್ಮ ಪ್ರಚಂಡ ಸೈನ್ಯವು ಹೊರಟಿದೆ. ನನ್ನಂತೆ ಹಲವುಜನ ಗುಪ್ತಹೇರರು ಹೊರಟಿದ್ದಾರೆ. ಆದರೆ ನನಗೆ ಯಾಕೋ ಕಂದಹಾರದ ಕಡೆಗೆ ಹೋಗದಂತೆ ಮನಸ್ಸಾಯಿತು. ನಮ್ಮ ರಾಜರ ಪುಣ್ಯಪ್ರಭಾವದಿಂದ ಶತ್ರುಗಳಿಗೆ ವಿಘ್ನವು ತಟ್ಟಿ ಅವರು ನಿಮ್ಮನ್ನು ಕಂದಹಾರದ ಕಡೆಗೆ ಸಾಗಿಸಿರಲಾರರೆಂಬ ಸಂಗತಿಯನ್ನು ನನ್ನ ಮನೋದೇವತೆಯು ಪ್ರೇರಿಸಿತು. ಅದಕ್ಕಾಗಿ ನಾನು ಈ ಅರಣ್ಯವನ್ನು ಸೇರಿ ಮುಸಲ್ಮಾನರ ಸುಳಿವು ಹತ್ತುವದೋ ಎಂದು ಶೋಧಿಸತೊಡಗಿದೆನು. ಇದಕ್ಕೂ ಮೊದಲು ಮುಸಲ್ಮಾನರ ಸೆರೆಸಿಕ್ಕ ಚಂದ್ರಕೇತು ಹಾಗು ವೀರಕೇತು ಎಂಬ ಇಬ್ಬರು ಜನರು

ತಪ್ಪಿಸಿಕೊಂಡು ಬಂದಬಳಿಕ ಮುಸಲ್ಮಾನ ಸೈನ್ಯಕ್ಕೂ ಯವನರಾಜಪುತ್ರನಿಗೂ ಭೆಟ್ಟಿಯಾಗಲಿಲ್ಲವೆಂದು ಹೇಳಿದ್ದರು. ಇದರಿಂದ ನನಗೆ ಅನುಮಾನವು ಉಂಟಾಗಲು ಮೇಲೆ ಹೇಳಿದಂತೆ ಮನೋದೇವತೆಯ ಪ್ರೇರಣೆಯಿಂದ ಇಲ್ಲಿ ಬಂದೆನು; ಅವ್ವನವರೇ, ನನ್ನ ವಿಷಯವಾಗಿ ಸ್ವಲ್ಪವೂ ಸಂಶಯ ತಾಳಬೇಡಿರಿ, ಈಗ ನಿಮ್ಮ ಶೋಧವಾದ್ದರಿಂದ ನನಗೆ ಅಪಾರವಾದ ಸಂತೋಷವಾಗಿದೆ ರಾಜಪುತ್ರರು ಒಪ್ಪಿಕೊಂಡರೆ ನಾನು ನಮ್ಮ ನಗರಿಗೆ ಹೋಗಿ ರಾಜರಿಗೆ ಈ ಸುವಾರ್ತೆಯನ್ನು ಹೇಳಿ ಸಕಲ ವೈಭವದಿಂದ ನಿಮ್ಮನ್ನು ಪಟ್ಟಣಕ್ಕೆ ಕರೆದೊಯ್ಯುತ್ತೇನೆ ಎಂದು ಬಿನ್ನವಿಸಿದನು.

ಆಗ ರಾಜಪುತ್ರನು—ಅಜಯಸಿಂಹಾ, ಇರಲಿ, ಬಿಡು; ಹಿಂದಿನಿಂದ ಮಾತಾಡೋಣ; ಕಳ್ಳರ ಈ ಗುಹೆಯಲ್ಲಿ ಏನೇನಿರುವದೆಂಬದನ್ನು ನೋಡೋಣ ನಡೆ ಎಂದನು. ಅಜಯಸಿಂಹನು ಜೀಯಾ, ಇದು ಸಾಹಸದ ಕೆಲಸವು; ಇದರಿಂದ ನಮಗೆ ಯಾವ ಪ್ರಯೋಜನವು? ಸುಮ್ಮನೆ ಗುಹೆಬಿಟ್ಟು ಹೊರಹೊರಡೋಣ; ಇಲ್ಲದಿದ್ದರೆ ಕಳ್ಳರು ಮುಗಿಬಿದ್ದು ನಮಗೆ ತೊಂದರೆಯನ್ನುಂಟು ಮಾಡಬಹುದು. ಎಂದನು. ಆತನ ಮಾತು ಕೇಳಿ ರಾಜಪುತ್ರನು ನಕ್ಕು— ಅಜಯಸಿಂಹನೇ, ಕ್ಷತ್ರಿಯವೀರರು ಇಂಥದಕ್ಕೆ ಸೊಪ್ಪು ಹಾಕುವರೇ? ಅಂಜಬೇಡನಡೆ; ಯಾವ ಸಂಕಟಬಂದರೂ ನಾನು ನೋಡಿಕೊಳ್ಳುತ್ತೇನೆ ಆ ನೀಚ ನಾಯಕನು ಇನ್ನೂ ಎಷ್ಟು ಜನ ತರುಣಿಯರನ್ನು ಸೆರೆಯಿರಿಸಿರುವನೋ ನೋಡೋಣ! ಎಂದು ನುಡಿದು ಗುಹೆಯಲ್ಲಿ ನುಗ್ಗಿದನು. ಅವನ ಹಿಂದಿನಿಂದ ಅಜಯಸಿಂಹನು ರಾಜಪುತ್ರಿಯರಿಬ್ಬರು ನಡೆದರು. ಗುಹೆಯು ಬಹಳ ವಿಶಾಲವಾಗಿದ್ದಿತು. ಸೌರಾಷ್ಟ್ರರಾಜಪುತ್ರಿಯಿದ್ದ ಗುಹೆಯನ್ನೇ ಮೊದಲು ನೋಡಿದರು. ಅದರ ಸೊಬಗು ವಿಶೇಷವಾಗಿತ್ತು. ಕೃತ್ರಿಮ ಉದ್ಯಾನಗಳಿಂದ, ಲತಾಮಂಟಗಳಿಂದ ಅದು ಬಹು ರಮ್ಯವಾಗಿತ್ತು. ಪೂರ್ವದಲ್ಲಿ ಋಷಿಗಳ ತಪೋಭೂಮಿಯಾದ ಆ ಗಹೆಯು ಈಗ ಕಳ್ಳರ ವಸತಿಗೃಹವಾಗಿತ್ತು. ರತ್ನಾಕರನೂ ಅಜಯಸಿಂಹನೂ ಆ ಹೆಂಗಳೆಯರೂ ಗುಹೆಯ ಭವ್ಯತೆಯನ್ನು ನೋಡಿ ಆಶ್ಚರ್ಯಪಟ್ಟರು. ಬಳಿಕ ಅವರು ರಾಜನಂದಿನಿಯಿದ್ದ ಗುಹೆಗೆ ಹೋದರು. ಅದರ ಸ್ಥಿತಿಯು ಈ ಗುಹೆಗಿಂತಲೂ ಭಿನ್ನವಾಗಿದ್ದಿತು. ಅದು ಕೇವಲ ಅಂಧಃಕಾರವುಳ್ಳದ್ದು, ಸೂರ್ಯನ ಕಿರಣಗಳ ಪ್ರವೇಶವು ಅದರಲ್ಲಿ ಆಗುವಂತಿರಲಿಲ್ಲ. ಅದಕ್ಕೆ

ಎಲ್ಲಿಯೂ ಪ್ರಶಸ್ಥವಾದ ಬಾಗಿಲುಗಳಿದ್ದಿಲ್ಲ. ಎರಡು ಕಳ್ಳ ಖಿಂಡಿಗಳು ಮಾತ್ರ ಇದ್ದವು. ಆ ಗುಹೆಯಲ್ಲಿ ಗೊರವೆಯ ಕಟ್ಟಿಗೆಯನ್ನು ಹೊತ್ತಿಸಿ ರಾಜಪುತ್ರನು ಅಡ್ಡಾಡಿ ನೋಡಿದನು. ಅಲ್ಲಿ ಕಳ್ಳರ ನಾಯಕನ ಹಲವು ಬಗೆಯ ಚೀಜ ವಸ್ತುಗಳಿದ್ದವು. ನವರತ್ನಗಳ ನಿಧಿಯೇ ಅಲ್ಲಿದ್ದಿತು. ರತ್ನಾಕರನು ಅವನ್ನೆಲ್ಲ ನೋಡಿ ಸಸ್ಸೈನ್ಯವಾಗಿ ಇಲ್ಲಿಗೆ ಬಂದು ಈ ದ್ರವ್ಯರಾಶಿಯನ್ನೆಲ್ಲ ಸಾಗಿಸಿಕೊಂಡೊಯ್ಯಬೇಕೆಂದು ಅಂದನು. ಅದಕ್ಕೆ ಅಜಯಸಿಂಹನು ಒಪ್ಪಿಕೊಂಡನು. ಬಳಿಕ ಅವರು ತಿರುಗಿ ದೊಡ್ಡ ಗುಹೆಗೆ ಬಂದು ಅಲ್ಲಿರುವ ಲತಾಮಂಟಪದಲ್ಲಿ ಕುಳಿತರು. ಆಗ ರತ್ನಾಕರನ ಮನಸ್ಸು ಪ್ರಸನ್ನವಾಗಿತ್ತು. ರಾಜಪುತ್ರನು ಒಂದು ಹಾಸುಗಲ್ಲ ಮೇಲೆ ಕುಳಿತನು. ಕೆಲಅಂತರದ ಮೇಲೆ ರಾಜನಂದಿನಿಯು ಕುಳಿತಳು. ಆಕೆಯ ಬಳಿಯಲ್ಲಿಯೇ ಸೌರಾಷ್ಟ್ರ ರಾಜಪುತ್ರಿಯು ಕುಳಿತಳು. ಅಜಯಸಿಂಹನು ದೂರದಲ್ಲಿ ವಿನಯದಿಂದ ಕೈಕಟ್ಟಿಕೊಂಡು ನಿಂತನು. ರತ್ನಾಕರನು ಕೂಡ್ರೆಂದು ಎಷ್ಟು ಸರಿಯಾಗಿ ಹೇಳಿದರೂ ಕೂಡ್ರಲಿಲ್ಲ. ಆಗ ರತ್ನಾಕರನು ಆತನು ನಮ್ಮೆದುರಿಗೆ ಕೂತರೆ ಸೇವ್ಯ-ಸೇವಕ ಭಾವಕ್ಕೆ ವ್ಯತ್ಯಾಸ ಬರುವದೆಂದು ಭಾವಿಸಿರಬಹುದು. ಎಂದು ತಿಳಿದು ಅಜಯಸಿಂಹಾ, ನಮ್ಮೆದುರಿಗೆ ಕೂಡ್ರಲು ನಿನಗೆ ಸಂಕೋಚವಾಗುತ್ತಿದ್ದರೆ ಎದುರಿಗೆ ಕಾಣುವ ಆ ಲತಾಮಂ-ಟಪದಲ್ಲಿ ಸ್ವಲ್ಪ ವಿಶ್ರಮಿಸು. ನಾನೂ ಕೆಲಹೊತ್ತು ವಿಶ್ರಮಿಸುತ್ತೇನೆ. ಬಳಿಕ ಮಿಥಿಲಾನಗರಿಯ ಮಾರ್ಗಕ್ಕೆ ಹತ್ತೋಣ ಎಂದು ಅಂದನು. ರಾಜಪುತ್ರನು ಇಷ್ಟು ಹೇಳಿದ್ದೊಂದೇ ತಡ; ಅಜಯಸಿಂಹನು ವಿನಯದಿಂದ ಮುಜುರೆ ಮಾಡಿ ಬೇರೊಂದು ಲತಾಮಂಟಪಕ್ಕೆ ಹೋಗಿ ವಿಶ್ರಾಂತಿಯನ್ನು ಹೊಂದಿದನು.

ಇತ್ತ ರಾಜಪುತ್ರ ರತ್ನಾಕರ ಹಾಗು ರಾಜನಂದಿನಿ-ಸೌರಾಷ್ಟ್ರ ರಾಜಪುತ್ರಿ ಹೀಗೆ ಮೂವರು ಉಳಿದರು. ರಾಜಪುತ್ರನಿಗೆ ರಾಜನಂದಿನಿಯ ಜೊತೆಯಲ್ಲಿರುವ ತರುಣಿಯು ಯಾರೆಂಬದು ಇನ್ನೂ ಗೊತ್ತಾಗಿರಲಿಲ್ಲ; ಗೊತ್ತುಮಾಡಿಕೊಳ್ಳಲಿಕ್ಕೆ ಅವಕಾಶವೂ ಇದ್ದಿಲ್ಲ; ಈ ತರುಣಿಯು ಯಾವಳೊಬ್ಬ ರಾಜಪುತ್ರಿಯಾಗಿರಬಹುದೆಂದು ಮಾತ್ರ ಭಾವಿಸಿದ್ದನು. ಆದರೆ ಈಗ ಸಮಯವು ಸಿಕ್ಕದ್ದರಿಂದ ರಾಜನಂದಿನಿಯನ್ನು ಕುರಿತು:—ಈ ನಿನ್ನ ಮೈತ್ರಿಣಿಯು ಯಾರು? ಎಂದು ಪ್ರಶ್ನೆಮಾಡಿದನು. ಆಗ ರಾಜನಂದಿನಿಯು ಆಕೆಯ ಎಲ್ಲ ಸಂಗತಿಗಳನ್ನು ತಿಳಿಸಿದಳು. ಅದನ್ನು ಕೇಳಿ ರಾಜಪುತ್ರನು ಅಸಮಾಧಾನಪಟ್ಟು ದೈವಗತಿಯು ವಿಚಿತ್ರ

ವಾದದ್ದು ಎಂದು ನುಡಿದನು. ಆಗ ಆ ಸೌರಾಷ್ಟ್ರ ರಾಜಪುತ್ರಿಯು:—ರಾಜ ಪುತ್ರರೇ, ವಿಧಿಲಿಖಿತವನ್ನು ಮೀರಲಿಕ್ಕೆ ಯಾರಿಗೆ ತಾನೆ ಶಕ್ಯವಿದೆ! ಬ್ರಹ್ಮವೇತ್ತ ರಾದ ಮಹರ್ಷಿಗಳೇ ವಿಧಿಲಿಖಿತಕ್ಕೆ ಒಳಗಾಗಿರಲು ನಮ್ಮಂಥವರ ಪಾಡೇನು! ನಾನು ಇಷ್ಟು ಕಷ್ಟಬಟ್ಟರೂ ಕಡೆಗೆ ನಿಮ್ಮಂಥ ರಾಜಪುತ್ರರ ದರ್ಶನವಾದದ್ದ ರಿಂದ ಧನ್ಯಳಾದೆನು. ಈ ಗುಹೆಯಲ್ಲಿಯೇ ಆತ್ಮಹತ್ಯಮಾಡಿಕೊಳ್ಳುವ ಪ್ರಸಂಗವು ನನಗೆ ಬರಲಿಲ್ಲ. ಇದು ದುಃಖದಲ್ಲಿ ಸುಖವೆಂದು ಹೇಳಬಹುದು! ನನ್ನನ್ನು ಸೆರೆ ಹಿಡಿಸಿ ಒಂದು ಪಕ್ಷವಾಗಿದ್ದರೂ ಆ ನೀಚನು ಇಂದು ಗುಹೆಗೆ ಬಂದು ನಮ್ಮನ್ನು ಪೀಡಿಸುವದಕ್ಕೂ ನೀವು ಗುಹೆಗೆ ಬರುವದಕ್ಕೂ ಸೇರಿಬಿದ್ದಿತು. ದೇವರೇ ನಿಮ್ಮನ್ನು ಇಲ್ಲಿಗೆ ಬರಮಾಡಿದನು. ಈದಿನ ನಾವು ಆ ನಾಯಕನನ್ನು ಕೊಂದು ಈ ಗುಹೆಯಿಂದ ಹೊರಬೀಳುತ್ತಿದ್ದೆವು. ಇಲ್ಲವೆ ಖಡ್ಗದಿಂದ ಆತ್ಮ ಹತ್ಯೆಮಾಡಿಕೊಂಡು ಇಹಲೋಕದಿಂದ ಹೊರಟು ಹೋಗುತ್ತಿದ್ದೆವು. ಆದರೆ ನಿಮ್ಮ ಶುಭಾಗಮನದಿಂದ ಮುಂದಿನ ಎಲ್ಲ ಅನರ್ಥಗಳು ತಪ್ಪಿದವು. ಇದಕ್ಕೆ ರಾಜನಂದಿನಿಯ ಪುಣ್ಯವೇ ಕಾರಣವಾಗಿರುವದು. ಆಕೆಯ ಬಿಡುಗಡೆಗಾಗಿಯೇ ದೇವರು ನಿಮ್ಮನ್ನು ಅರಣ್ಯಕ್ಕೆ ಕಳಿಸಿದನು. ಆಕೆಯ ನಿಮಿತ್ತದಿಂದ ನನ್ನ ಬಿಡುಗಡೆಯೂ ಆಗಬೇಕಾಯಿತು. ನಾನಾಗಲಿ, ರಾಜನಂದಿನಿಯಾಗಲಿ ಅಬಲೆ ಯರು. ನಮಗೆ ಪುರುಷರಷ್ಟು ಸಾಮರ್ಥ್ಯವಿಲ್ಲ. ನಾನು ಬೇಟೆಯಾಡುವದರಲ್ಲಿ ನಿಷ್ಣಾತಳಿದ್ದರೂ ನಿಮ್ಮಂಥ ರಾಜಪುತ್ರರಷ್ಟು ಶೌರ್ಯವು ನನಗೆ ಹ್ಯಾಗೆ ಬಂದೀತು. ಸ್ತ್ರೀಯರನ್ನು ಸಂರಕ್ಷಿಸುವ ಭಾರವು ಪುರುಷರ ಕಡೆಗೇ ಇರುವದು. ಅಬಲೆಯರಾದ ನಮ್ಮನ್ನು ರಕ್ಷಿಸುವ ಭಾರವು ನಿಮ್ಮನ್ನೇ ಕೂಡಿಯದೆ.

ಈ ಮೇರೆಗೆ ಆ ತರುಣಿಯು ಮಾತನಾಡಲು, ರಾಜಪುತ್ರನು ಮನಸ್ಸಿನಲ್ಲಿ ಇಂತು ವಿಚಾರಿಸಿದನು—ಆಹಾ! ಈ ತರುಣಿಯಾದರೂ ಬಹು ವಿನಯಸಂಪ ನ್ನಳೂ, ಮಂಜುಭಾಷಿಣಿಯೂ ಇರುವಳು. ರೂಪವಂತೂ ಬಲು ಮನೋ ಹರ! ರಾಜನಂದಿನಿಯಷ್ಟು ಚಲುವೆಯಾಗಿರದಿದ್ದರೂ, ಮಾತಿನಲ್ಲಿ ಹೆಚ್ಚು ಕುಶಲ ಳಿರುವಳು. ಭವಿತವ್ಯವು ಹ್ಯಾಗಿದೆಯೋ ತಿಳಿಯದು! ಇರಲಿ. ಈಗ ಹೆಚ್ಚಿನಮಾತು ಏಕೆ? ಮೊದಲು ಸುರಕ್ಷಿತವಾಗಿ ಯಾವದೊಂದು ನಗರಿಯನ್ನು ಮುಟ್ಟೋಣ. ಬಳಿಕ ಮುಂದಿನ ಯೋಚನೆ. ಎಂದು ಭಾವಿಸಿ, (ಪ್ರಕಾಶವಾಗಿ) ರಾಜಪುತ್ರೀ, ನೀನು ಹೇಳಿದ್ದೆಲ್ಲವೂ ನಿಜವೇ; ನಾನು ನನ್ನ ದೇಹದಲ್ಲಿ ಪ್ರಾಣವಿರುವವರೆಗೂ

ನಿಮ್ಮ ರಕ್ಷಣೆಯ ಕಾರ್ಯವನ್ನು ಮಾಡುವೆನು. ಭಗವಂತನ ಇಷ್ಟೆಯಿದ್ದಂತೆ ಆಗುವದು. ಅದಕ್ಕಾಗಿ ಯೋಚಿಸಿ ಪ್ರಯೋಜನವಿಲ್ಲ. ಈಗ ಮುಂದಿನ ಯೋಚನೆ ಯನ್ನು ಮಾಡೋಣ! ನಿಮ್ಮಿಬ್ಬರ ಒಪ್ಪಿಗೆಯಂತೆ ನಾನು ನಡೆಯಬೇಕಾಗು ತ್ತದೆ. ಯಾಕಂದರೆ ನೀವಿಬ್ಬರೂ ಅರಮನೆಯಲ್ಲಿ ಬೆಳೆದವರು. ಈಗ ಮಿಥಿಲಾ ನಗರಿಯನ್ನು ಕಾಣುವ ಬಗೆ ಹ್ಯಾಗೆ? ನನ್ನ ಬಳಿಯಲ್ಲಿದ್ದ ಕುದುರೆಯು ಕೈ ಬಿಟ್ಟಿತು ಬೇರೆ ವಾಹನಗಳಿಲ್ಲ. ಸೇವಕರಿಲ್ಲ, ಎಂದನು.

ಇಬ್ಬರೂ ರಾಜಪುತ್ರಿಯರು ಏಕಕಂಠದಿಂದ—ರಾಜಪುತ್ರರೇ, ಅದ ಕ್ಕಾಗಿ ಇಷ್ಟೊಂದು ಯೋಚನೆ ಯಾಕೆ? ಈಗ ನಾವು ದಾರೀ ನಡೆಯಲಿಕ್ಕೆ ಒಲ್ಲೆಂದರೆ ಹ್ಯಾಗೆ ನಡೆಯುವದು? ನಮ್ಮ ಶೀಲವಾದರೂ ಹ್ಯಾಗೆ ಉಳಿದೀತು? ದೇಹಕ್ಕೆ ಕಷ್ಟಕೊಟ್ಟಹೊರತು ಸೌಖ್ಯವು ಸಿಗಲಾರದು. ನಾವು ಅರಮನೆ ಯಲ್ಲಿಯೇ ಇದ್ದರೆ ಕಷ್ಟವೆಂದರೇನು? ಸೌಖ್ಯವೆಂದರೇನು? ಇವುಗಳ ತಾರ ತಮ್ಯವೇ ನಮಗೆ ತಿಳಿಯುತ್ತಿದ್ದಿಲ್ಲ. ಈಶ್ವರೀ ಸಂಕೇತದಂತೆ ಆದದ್ದು ಒಳಿ ತಾಗಿದೆ. ನಾವು ನಿಮ್ಮನ್ನು ಹಿಂಬಾಲಿಸುವೆವು ಬೇಗನೇ ಮಾರ್ಗಕ್ಕೆ ಹತ್ತಿರಿ. ಎಂದರು. ಅವರ ಮಾತಿನಿಂದ ರಾಜಪುತ್ರನಿಗೆ ಸಂತೋಷವಾಯಿತು. ಅವನು ಅಜಯಸಿಂಹನನ್ನು ಕೂಗಿ ಕರೆದನು. ಆತನು ಬರಲು ಈ ವಿಷಯವನ್ನು ಅವನ ಮುಂದೆ ಹೇಳಿದನು. ಆಗ ಅಜಯಸಿಂಹನು—ಒಡೆಯರೇ, ಆರುತಾಸುಗಳ ದಾರಿಯಮೇಲೆ ಮೋಹನಪುರವೆಂಬ ನಗರವುಂಟು; ಅದು ನಮ್ಮ ರಾಜ್ಯಕ್ಕೆ ಸೇರಿದ್ದು; ಅಲ್ಲಿರುವ ರಾಜಪ್ರಾಸಾದದಲ್ಲಿ ತಾವು ಸುಖವಾಗಿದ್ದರೆ ನಾನು ಮಿಥಿಲಾನಗರಿಗೆ ಹೋಗಿ ಸಕಲ ಸನ್ನಾಹಗಳನ್ನು ಸಿದ್ಧಪಡಿಸಿಕೊಂಡು ಬರುವೆನು. ಎಂದು ಬಿನ್ನವಿಸಿದನು. ಅದು ಎಲ್ಲರ ಮನಸ್ಸಿಗೂ ಬರಲು ಆ ಕ್ಷಣದಲ್ಲಿಯೇ ಅವರು ಆ ಗುಹೆಯನ್ನು ತ್ಯಜಿಸಿ ಹೊರ ಹೊರಟರು. ಆಗ ಮಧ್ಯಾಹ್ನದ ಸಮಯವಾಗಿತ್ತು. ಆದರೂ ದಾರಿಯಲ್ಲಿ ಸಿಕ್ಕ ಫಲಗಳನ್ನು ಭಕ್ಷಿಸುತ್ತ ಅವರು ಹಾಗೇ ಮಾರ್ಗಕ್ರಮಿಸತೊಡಗಿದರು. ರಾಜಕನ್ನಿಕೆಯರ ಮೇಲೆ ಮತ್ತಾವ ಗಂಡಾಂತರವುಂಟಾಗಬಾರದೆಂದೇ ಅವರು ಆದಷ್ಟು ಶೀಘ್ರವಾಗಿ ಆ ಅರಣ್ಯ ವನ್ನು ದಾಟಬೇಕೆಂದು ನಿಶ್ಚಯಿಸಿದರು. ರಾಜಪುತ್ರಿಯರಿಗೆ ಪಥಶ್ರಮವು ದುಸ್ಸಾಧ್ಯವಾದರೂ ಸ್ವಶೀಲರಕ್ಷಣೆಯ ಕಡೆಗೆ ದೃಷ್ಟಿಯನ್ನಿಟ್ಟು ನಡೆಯ ತೊಡಗಿದರು.

ಆಗ ರಾಜನಂದಿನಿಯು ಮನಸ್ಸಿನಲ್ಲಿ— ನಾನು ದೇವರ ದಯದಿಂದ ನಗರಿಯನ್ನು ಮುಟ್ಟಿದರೆ, ನನ್ನ ಸಮಾನ ಧನ್ಯರು ಯಾರೂ ಇಲ್ಲವೆಂದು ತಿಳಿಯುವೆನು. ರಾಜಪುತ್ರನಂಥ ಅನುರೂಪ ಪತಿಯು ನನಗೆ ದೊರಕಿರುವನು. ನನ್ನ ಪಾಣಿಗ್ರಹಣದಿಂದ ಆತನು ಉಭಯ ರಾಜ್ಯಗಳ ಒಡೆಯನಾಗುವನು. ಅಹಾ! ನಾನೆಷ್ಟು ಧನ್ಯಳು! ಎಂದು ಮನೋರಾಜ್ಯದಲ್ಲಿ ವ್ಯವಹರಿಸಲಾರಂಭಿಸಿದಳು. ಅದರಂತೆ ಸೌರಾಷ್ಟ್ರ ರಾಜಕುವರಿಯಾದರೂ ಭಾವೀಸುಖದ ಕಲ್ಪನೆಯನ್ನು ಮಾಡತೊಡಗಿದಳು—"ನಾನಿನ್ನೂ ಕುಮಾರಿಕೆಯಾಗಿದ್ದು, ಈ ರಾಜಪುತ್ರನೇ ನನಗೆ ಪತಿಯಾದರೆ ನಾನು ಧನ್ಯಳಾಗುವೆನು. ಇದರಿಂದ ಈ ರಾಜನಂದಿನಿಯು ನನಗೆ ಸವತಿಯಾಗುವಳು. ಆಗ ನಮ್ಮಿಬ್ಬರ ಸಖ್ಯವು ತೊಲಗಬಹುದು. ಛೀ, ಹಾಗೆ ಆಗಲು ಕಾರಣವೇನು? ರಾಜನಂದಿನಿಯನ್ನು ದ್ವೇಷಿಸಲು ನನಗೂ ಕಾರಣವಿಲ್ಲ. ನನ್ನನ್ನು ದ್ವೇಷಿಸಲು ಆಕೆಗೂ ಕಾರಣವಿಲ್ಲ. ಇಬ್ಬರೂ ಈಗಿನಂತೆ ಪರಮ ಸಖ್ಯದಿಂದ ಕಾಲಕ್ರಮಿಸುವೆವು. ನನ್ನ ಈ ವಿಚಾರಗಳು ಆಕೆಗೆ ಸರಿಬರಹುದು. ರಾಜಪುತ್ರನು ಮಾತ್ರ ನನ್ನನ್ನು ಒರಿಸಲು ಒಪ್ಪಿಕೊಳ್ಳಬೇಕು." ಎಂದು ಮನದಲ್ಲಿ ಭಾವೀಸುಖವನ್ನು ಚಿಂತಿಸುತ್ತಿದ್ದಳು. ಇವರಿಬ್ಬರಂತೆ ರಾಜಪುತ್ರನ ಅವಸ್ಥೆಯೂ ಆಗಿತ್ತು. ಅವನೂ ಮನಸ್ಸಿನಲ್ಲಿ ಇದೇ ಬಗೆಯ ಯೋಚನೆಯನ್ನೇ ಮಾಡುತ್ತಿದ್ದನು. ರಾಜನಂದಿನಿಯಂತೂ ನನ್ನನ್ನು ಮನಮುಟ್ಟಿ ಪ್ರೀತಿಸುವಳು. ಆದರೆ ಈ ಹೊಸ ತರುಣಿಯು ಏನು ಮಾಡುವಳೋ ತಿಳಿಯದು! ಈಕೆಯ ಮಾತಿನಿಂದ ಈಕೆಯೂ ಕುಮಾರಿಕೆಯಿದ್ದು, ನನ್ನನ್ನೇ ಪತಿಯನ್ನಾಗಿ ಮಾಡಿಕೊಳ್ಳಲು ಇಚ್ಛಿಸುವಳೆಂದು ಭಾಸವಾಗುವದು. ಈ ಭಾಸವು ಅಭಾಸ ಮಾತ್ರ ಆಗಬಾರದು. ಭಗವಂತನ ಸಂಕೇತದಂತೆ ನನಗೆ ಇಬ್ಬರೂ ಮಡದಿಯರಾದರೆ ನಾನು ಧನ್ಯನೇ ಸರಿ! ಇಂಥ ಸುಂದರ ರಾಜಪುತ್ರಿಯರು ದೊರೆಯುವದು ದುರ್ಲಭವೇ ಆಹುದು. ಒಂದುವೇಳೆ ಈ ಇಬ್ಬರೂ ಸುಂದರಿಯರು ನನ್ನ ಪಾಣಿಗ್ರಹಣವನ್ನು ಮಾಡಿದರೆ ಇವರೊಡನೆ ನಾನು ಹ್ಯಾಗೆ ನಡಕೊಳ್ಳಬೇಕಾದೀತು? ಇವೇ ಮುಂತಾದ ದೀರ್ಘ ಆಲೋಚನೆಗಳಿಂದ ಯುಕ್ತನಾಗಿ ನಡನಡುವೆ ಭಾವೀಸುಖದ ಆಸ್ವಾದವನ್ನು ಕಲ್ಪನಾಮಾತ್ರದಿಂದಲೇ ಹೊಂದುತ್ತಿದ್ದನು. ಇತ್ತ ಅಜಯಸಿಂಹನಾದರೂ ಈ ಅಮೃತಸದೃಶ ವಾರ್ತೆಯನ್ನು ಅರುಹುವದರಿಂದ ರಾಜನು ನನಗೆ ಏನು ಇನಾಮು ಕೊಡಬಹುದು? ಎಂದು

ಸುಖಕಲ್ಪನೆಯನ್ನು ತಾಳಿದ್ದನು. ಒಟ್ಟಿಗೆ ದಾರಿಕಾರರಾದ ಆ ನಾಲ್ವರೂ ಭಾವೀ ಸುಖದ ಕಲ್ಪನೆಯಲ್ಲಿಯೇ ಮಗ್ನರಾಗಿದ್ದರು. ಆದ್ದರಿಂದ ಪಥಶ್ರಮವು ಅವರಿಗೆ ತಿಳಿಯದಾಯಿತು. ಮನಸ್ಸನ್ನು ಅನ್ಯತ್ರದಲ್ಲಿರಿಸಿದರೆ ದೇಹಕಷ್ಟವು ತಿಳಿಯುವದಿಲ್ಲೆಂದು ದೊಡ್ಡವರಾಡುವ ಮಾತು ನಿಜವಲ್ಲವೇ?

---

## ೧೪ನೆಯ ಪ್ರಕರಣ—ಕ್ಷಾತ್ರತೇಜ.

ವಾಚಕರೇ, ಮಾರ್ಗಸ್ಥರಾದ ರಾಜಪುತ್ರ-ರಾಜನಂದಿನಿಯರನ್ನು ಬಿಟ್ಟು ಮಿಥಿಲಾನಗರಿಯಿಂದ ಹೊರಟ ಸೈನಿಕರು ಏನೇನು ಮಾಡಿದರೆಂಬದನ್ನು ನೋಡುವಾ, ಬನ್ನಿರಿ. ಮಿಥಿಲಾನಗರಿಯಿಂದ ಹೊರಟ ಸೈನ್ಯವು ಮೂರು ಭಾಗಗಳಾಗಿ ಅಫಗಾನ ಸೈನ್ಯವನ್ನು ಶೋಧಿಸುತ್ತ ನಡೆಯಿತು. ಕಣಿವೆ ದಾಟಿದ ಬಳಿಕ ಮೂರೂಭಾಗಗಳು ಕೂಡಿದವು. ಅಷ್ಟರಲ್ಲಿ ಅಫಗಾನಸೈನ್ಯವು ಕೂಡಿದ್ದರಿಂದ ಮಿಥಿಲಾಸೈನಿಕರಿಗೆ ತುಂಬಾ ಹುರುಪುವುಂಟಾಯಿತು.

ಅಫಗಾನಸೈನ್ಯವು ಅಷ್ಟೇನೂ ಒತ್ತರದಿಂದ ಸಾಗಿದ್ದಿಲ್ಲ. ಹಿಂದೂಸೈನಿಕರು ತಮ್ಮನ್ನು ಹುಡುಕುತ್ತ ಬರುವರೆಂದು ಅವರು ಕಲ್ಪಿಸಿದ್ದಿಲ್ಲ. ಅವರ ಸೈನ್ಯದ ಎಷ್ಟೋ ಭಾಗವು ಮಿಥಿಲಾನಗರದಲ್ಲಿಯ ಯುದ್ಧದಲ್ಲಿಯೇ ಮಡಿದು ಹೋಗಿತ್ತು. ಉಳಿದ ಸೈನ್ಯವು ತಮ್ಮ ರಾಜಪುತ್ರನನ್ನು ಕಾಣದೆ ಖಿನ್ನಮನಸ್ಸಿನಿಂದ ಸಾಗಿತ್ತು.

ಹಿಂದೂಸೈನಿಕರು ಒಳ್ಳೇ ರಭಸದಿಂದ ಅಫಗಾನ ಸೈನ್ಯಕ್ಕೆ ಪ್ರತಿಬಂಧ ಮಾಡಿದರು. ಬಳಿಕ ಕೇಳುವದೇನು? ಉಭಯ ಪಕ್ಷಗಳಲ್ಲೂ ಯುದ್ಧಕ್ಕೆ ಪ್ರಾರಂಭವಾಯಿತು. ರಣವಾದ್ಯಗಳು ಘೋರ್ಗರೆಯಹತ್ತಿದವು. ಯುದ್ಧವು ಭಯಂಕರವಾಗಿ ಸಾಗಿತು.

ಹಿಂದೂ ಸೈನ್ಯಾಧಿಪತಿಯ ಸೈನ್ಯವ್ಯವಸ್ಥೆಯು ಒಳ್ಳೇ ವರ್ಣನೀಯವಾಗಿತ್ತು. ಖಡ್ಗಧಾರಿಗಳಾದ ಕಾಲಾಳುಗಳಿಂದಲೂ, ರಾವುತರಿಂದಲೂ, ಆನೆಗಳಿಂದಲೂ ಯುದ್ಧಭೂಮಿಯು ತುಂಬಿಹೋಯಿತು.

ಪಠಾಣಸೈನ್ಯವೇನೂ ಸಾಮಾನ್ಯವಾದದ್ದಿದ್ದಿಲ್ಲ; ಚಳಿನಾಡಿನ ಗಟ್ಟಿಗರಾದ ಅವರು ಹಿಂದೂಸೈನ್ಯದ ಸಂಗಡ ಒಳ್ಳೇ ಶೌರ್ಯದಿಂದ ಕಾದುತ್ತಿದ್ದರು. ಅವರ ಶೌರ್ಯವನ್ನು ನೋಡಿ ಹಿಂದುಗಳು ಒಳ್ಳೇ ಉತ್ಸಾಹಪೂರ್ಣರಾದರು. ಇತ್ತ ಹಿಂದೂ ಸೇನಾಪತಿಯು ತನ್ನ ಸೈನ್ಯದಲ್ಲೆಲ್ಲ ತಿರುಗುತ್ತ ಅವರಿಗೆ ಸ್ಥೈರ್ಯಕೊಡುತ್ತಿದ್ದನು. "ಭಾಪು! ವೀರರೇ ಭಾಪು!! ಇಂದು ನಿಮ್ಮ ಸತ್ವಪರೀಕ್ಷೆಯ ಕಾಲವು ಬಂದೊದಗಿದೆ. ನಾವು ಇಂದು ಈ ಪಠಾಣಸೈನ್ಯವನ್ನು ಸೋಲಿಸಿ, ರಾಜಪುತ್ರಿಯನ್ನು ಕರಕೊಂಡೇ ರಾಜಧಾನಿಗೆ ಹೋಗಬೇಕು. ಅಲ್ಲಿಯವರೆಗೆ ನಾವು ಅರಸನಿಗೆ ಮೋರೆತೋರಿಸುವಂತಿಲ್ಲ. ಈ ಸಂಗತಿಯು ನಿಮಗೆ ಗೊತ್ತಿದ್ದದ್ದೇ ಇದೆ. ನೀವು ಅಂಷಿನ ಸಭೆಯಲ್ಲಿ ಪ್ರತಿಜ್ಞಾಮಾಡಿ ಯುದ್ಧಕ್ಕೆ ಬಂದಿರುವಿರಿ. ಇಂದು ನಿಮ್ಮ ತೋಳತಿಂಡೆಯನ್ನು ತೀರಿಸಿಕೊಳ್ಳಿರಿ. ನಿಮ್ಮ ಖಡ್ಗಗಳಿಗೆ ಮನದಣೀ ರಕ್ತಪಾನ ಮಾಡಿಸಿರಿ" ಎಂಬ ಮಾತುಗಳು ಅವನ ಮುಖದಿಂದ ಹೊರಡುತ್ತಿದ್ದವು.

ಎರಡೂ ಕಡೆಯ ಸೈನಿಕರು ಜೀವದ ಹಂಗುದೊರೆದು ಕಾದುತ್ತಿದ್ದರು. ಲಕಲಕನೆ ಹೊಳೆಯುವ ಖಡ್ಗಗಳ ಖಣಖಣಾಟವು ಎಡಬಿಡದೆ ನಡೆದಿತ್ತು. ಅಶ್ವಾರೂಢರಾದ ಸೈನಿಕರ ಧನುಸ್ಸುಗಳು ಯಾವಾಗಲೂ ಚಕ್ರಾಕಾರವಾಗಿ ಕಾಣುತ್ತಿದ್ದವು. ಬಾಣಗಳು 'ಸುಯ್'ಗುಡುತ್ತ ವೈರಿಗಳ ಮರ್ಮವನ್ನು ಭೇದಿಸುತ್ತಿದ್ದವು. ಖಡ್ಗಗಳ ಹೊಡತದಿಂದ ವೀರರ ಶಿರಃಕಮಲಗಳು ಭೂಮಿಯ ಮೇಲೆ ಪಟಪಟನೆ ಬೀಳುತ್ತಿದ್ದವು. ಅಲ್ಲಿ ರಕ್ತದ ಕಾಲುವೆಯು ಹರಿಯಹತ್ತಿತು. ವೀರರೆಲ್ಲರು ರಕ್ತದಿಂದ ಸ್ನಾನಮಾಡಿದಂತೆ ತೋರುತ್ತಿದ್ದರು.

ಹಿಂದುಗಳ ಪ್ರಚಂಡಸೈನ್ಯಕ್ಕೆ ಅಫಗಾನರ ಸೈನ್ಯವು ಈಡಾಗಲಿಲ್ಲ ಅವರಲ್ಲಿಯ ಧನುರ್ಧಾರಿಗಳಾದ ಸೈನಿಕರು ಗುಡ್ಡದ ಓರೆಯಲ್ಲಿಯೂ, ಬಂಡೆಗಲ್ಲುಗಳ ಮರೆಯಲ್ಲಿಯೂ ಕುಳಿತುಕೊಂಡುಮೋಸದ ಯುದ್ಧವನ್ನಾರಂಭಿಸಿದರು. ಅವರು ಬಿಟ್ಟ ಬಾಣಗಳು ಸುಯ್‌ಗುಡುತ್ತ ಹಿಂದೂವೀರರ ಹೃದಯವನ್ನು ಭೇದಿಸಹತ್ತಿದವು. ಆಗ ಹಿಂದುಗಳಿಗೆ ಒಳ್ಳೇ ದಿಗಿಲು ಬದ್ದಿತು. ಆ ಬಾಣಗಳು ಎಲ್ಲಿಂದ ಬರುವವೆಂಬದು ಅವರಿಗೆ ತಿಳಿಯದಾಯಿತು. ಮೇಲೆ ಮೋರೆಯನ್ನೆತ್ತಿ ನೋಡುವಷ್ಟರಲ್ಲಿಯೇ ಬಾಣಗಳು ಬಡಿದು ಧರೆಗೆ ಉರಳಬೇಕಾಗುತ್ತಿತ್ತು; ಪರ್ವತದೊಳಗಿನ ಬಂಡೆಗಲ್ಲಿನಿಂದ ಆ ಬಾಣಗಳು ಬರುವವೆಂಬದು ಅವರಿಗೆ ಕಂಡುಬಂದಿತು.

ಆಗ ಅವರು ಪರ್ವತದ ಬಂಡೆಗಲ್ಲುಗಳಿಗೇನಾದರೂ ಜೀವ ಬಂದಿರಬಹುದೇ ನೆಂದು ಯೋಚಿಸತೊಡಗಿದರು.

ಇದೀಗ್ಗೆ ಚಳಿಗಾಲವು ಆರಂಭವಾಗಿತ್ತು. ಪರ್ವತ ಶ್ರೇಣಿಗಳು ಹಿಮಾಚ್ಛಾದಿತವಾಗಿದ್ದವು. ದೊಡ್ಡದೊಡ್ಡ ಬಂಡೆಗಳಂತೂ ಹಿಮದಿಂದ ಮುಚ್ಚಿ ಬಿಳಿಯವಾಗಿ ತೋರುತ್ತಿದ್ದವು. ಆದ್ದರಿಂದ ಅಂಥ ಬಂಡೆಗಲ್ಲುಗಳ ಹಿಂದೆ ಕುಳಿತ, ಶುಭ್ರ ಮುಂಡಾಸವನ್ನು ಸುತ್ತಿದ ಅಫಗಾನರ ತಲೆಗಳು ಹಿಮದಂತೆಯೇ ಭಾಸವಾಗುತ್ತಿದ್ದವು. ಮನುಷ್ಯರ ಗದ್ದಲವು ಅಲ್ಲಿ ಸ್ವಲ್ಪವೂ ಇರದ್ದರಿಂದ ಹಿಂದೂ ವೀರರಿಗೆ ಹೀಗೆ ಅಚ್ಚರಿಯಾದದ್ದು ಅರಿದಲ್ಲ.

ಹಿಂದೂ ಸೈನ್ಯಾಧಿಪತಿಯು ಪರ್ವತದ ಮರೆಯಲ್ಲಿ ವೈರಿಗಳ ಸೈನ್ಯವಿರುವ ದೆಂದು ಕಂಡುಹಿಡಿದನು. ಕೂಡಲೇ ಅವನು ತನ್ನ ಸೈನ್ಯದ ಕೆಲಭಾಗವನ್ನು ಬೆಟ್ಟದಮೇಲೆ ಕಳಿಸಿದನು. ಕೂಡಲೇ ಅಫಗಾನರು ಪರ್ವತದ ಮೇಲಿಂದ ಹಿಂದೂಜನರಿದ್ದ ಕಂದಕದೊಳಗೆ ದೊಡ್ಡ ದೊಡ್ಡ ಬಂಡೆಗಳನ್ನು ಉರುಳಿಸ ತೊಡಗಿದರು. ಇದರಿಂದ ಹಿಂದೂಸೈನ್ಯವು ಭಯಂಕರವಾಗಿ ನಾಶವಾಗಹತ್ತಿತು.

ಆದರೆ ಹಿಂದೂಸೈನಿಕರೇನು ಹೇಡಿಗಳಿದ್ದರೆ? ಉಷ್ಣಪ್ರದೇಶದವರೆಂದು ಚಳಿಗೆ ಬೆದರಿದರೆ? ಇಲ್ಲ. ಕೂಡಲೇ ಅವರು ಪರ್ವತವನ್ನೇರಿ ಎಲ್ಲ ಅಫಗಾನ ಸೈನ್ಯದಮೇಲೆ ಬಿದ್ದರು. ಬಳಿಕ ಕೇಳುವದೇನು? ಅಫಗಾನ ಸೈನ್ಯವು ದಾರಿ ಸಿಕ್ಕತ್ತ ಓಡತೊಡಗಿತು. ಆಗ ಸೇನಾನಾಯಕನು ಯುದ್ಧವನ್ನು ನಿಲ್ಲಿಸಲು ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು; ಮತ್ತು ಶಸ್ತ್ರಗಳನ್ನು ಕೆಳಗಿಟ್ಟು ತನ್ನ ಕಡೆಗೆ ಬಂದವರಿಗೆ ಜೀವದಾನ ಕೊಟ್ಟು ಕಳಿಸಿದನು. ಅಭಿಮಾನಿಗಳಾದ ಕೆಲ ಅಫಗಾನರು ಯುದ್ಧಮಾಡುವದನ್ನು ಬಿಡಲಿಲ್ಲ. ಆದ್ದರಿಂದ ಅವನು ಅವರನ್ನು ಬಂಧಿಸಿ, ಸೆರೆಯಲ್ಲಿರಿಸಿದನು.

ಯುದ್ಧವು ಶಾಂತವಾದ ಮೇಲೆ ಸೇನಾಧಿಪತಿಯು ಅಫಗಾನರ ಎಲ್ಲ ಸಾಮಾನುಗಳನ್ನು ಲೂಟಿಮಾಡಿಸಿದನು. ಅಸಂಖ್ಯ ಆನೆಗಳೂ, ಕುದುರೆಗಳೂ, ಆಯುಧಗಳೂ ದೊರೆತವು. ಆದರೇನು? ಅವನು ಯಾವ ವಸ್ತುವಿನ ಸಲುವಾಗಿ ಯುದ್ಧ ನಡೆಸಿದ್ದನೋ ಅದೇ ಸಿಗಲಿಲ್ಲ. ಅವನ ವಸ್ತುವೆಂದರೆ ರಾಜನಂದಿನಿ ಎಂಬದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅಫಗಾನರ ಸೆರೆಯಲ್ಲಿ ರಾಜನಂದಿನಿಯಿರದ್ದನ್ನು ಕಂಡು ಅವನಿಗೆ ತುಂಬಾ ಖೇದವಾಯಿತು.

ಸೇನಾಧಿಪತಿಯು ಬಹಳ ಹೊತ್ತಿನ ವರೆಗೆ ವಿಚಾರಿಸಿದನು. ಅವನಿಗೆ ಏನೂ ತೋಚದಾಯಿತು. ಅವನು ತನ್ನೊಳಗೆ:—"ರಾಜಪುತ್ರಿಯನ್ನು ಆ ದುಷ್ಟರು ಎಲ್ಲಿಗೆ ಒಯ್ದಿರಬಹುದು? ಆ ಯುವನ ರಾಜಪುತ್ರನೂ-ಅವನು ಅಪಹರಿಸಿತಂದ ನಮ್ಮ ರಾಜನಂದಿನಿಯೂ ಕೂಡ ಇಲ್ಲಿ ಇದ್ದಂತೆ ತೋರುವದಿಲ್ಲ. ಅಂದಮೇಲೆ ಅವರು ಕಂದಹಾರಕ್ಕೆ ಹೋಗಿರಬಹುದೇನು? ಛೇ, ಇಷ್ಟು ಜೇಗನೆ ಅವರು ಅಲ್ಲಿಗೆ ಹೋಗುವದುಂಟೆ? ಸೈನ್ಯವನ್ನು ಬಿಟ್ಟು ಅವರೇಕೆ ಹೋದಾರು? ಶತ್ರುಗಳನ್ನು ಪೂರ್ಣ ಪರಾಭವಗೊಳಿಸಿದೆನು. ಆದರೂ ಕಾರ್ಯವಾಗದೆ ಹೋಯಿತು. ಮುಂದೆ ಏನು ಮಾಡಬೇಕು? ಎಂದು ಯೋಚಿಸಿದನು.

ತುಸ ಹೊತ್ತಿನಮೇಲೆ ಅವನು ಆವುದೋ ಒಂದು ಹಂಚಿಕೆ ಹುಡುಕಿ ಓರ್ವ ಸೇವಕನನ್ನು ಕರೆದನು. ಸೇವಕನು ಬಂದು ಕೈಜೋಡಿಸಿಕೊಂಡು:—"ಬುದ್ಧೀ, ಏನಪ್ಪಣೆ?" ಎಂದು ನುಡಿದನು.

"ಕೂಡಲೇ ನೀನು ಹೋಗಿ ಬಂಧಿಸಲ್ಪಟ್ಟ ಆ ಅಫಗಾನ ಸೈನಿಕರನ್ನು ಕರೆದುಕೊಂಡು ಬಾ." ಎಂದು ಅಪ್ಪಣೆ ಮಾಡಿದನು.

ಸೇವಕನು ಅಪ್ಪಣೆಯಂತೆ ಹೊರಟುಹೋದನು. ಇತ್ತ ನಾಯಕನು ಪುನಃ ತನ್ನೊಳಗೆ ಈ ಪ್ರಕಾರ ಯೋಚಿಸಹತ್ತಿದನು. "ಈ ಸೈನಿಕರನ್ನು ಕೇಳಿದರೆ ಎಲ್ಲ ಸಂಗತಿಯು ತಿಳಿಯಬಹುದು. ಆದರೆ ಸ್ವಾಮಿನಿಷ್ಠರಾದ ಆ ಸೇವಕರು ನನಗೆ ನಿಜಸಂಗತಿಯನ್ನು ಹೇಳುವದೆಂತು? ಅವರು ನಿಜಸಂಗತಿಯನ್ನು ಗೌಪ್ಯವಾಗಿಟ್ಟು ತಮ್ಮ ಸ್ವಾಮಿಯನ್ನುಳಿಸಲು ಸುಳ್ಳು ಹೇಳಬಹುದು. ಆದರೆ ಅವರನ್ನು ಚನ್ನಾಗಿ ಪೀಡಿಸಿದರೆ ಅವರೇ ಹೇಳುವರು. ಅವರ ಜೀವದಮೇಲೆ ಪ್ರಸಂಗ ಬಂದರೆ ಹೇಳದೇನು ಮಾಡ್ಯಾರು?"

ಅಷ್ಟರಲ್ಲಿ ಸೇವಕನು ಸೆರೆಯಾಳುಗಳನ್ನು ತಂದು ಸೇನಾಧಿಪತಿಯ ಎದುರಿಗೆ ನಿಲ್ಲಿಸಿದನು. ಸೆರೆಯಾಳುಗಳೇನೂ ಸಾಮಾನ್ಯರಿದ್ದಿಲ್ಲ. ಅವರ ಸ್ವಾಭಿಮಾನವು ಅವರ ಮುಖದಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಅವರು ಗಂಭೀರ ಮುದ್ರೆಯಿಂದ ಸೇನಾಪತಿಯ ಎದುರಿಗೆ ನಿಂತುಕೊಂಡರು.

ಸೇನಾಪತಿಯು ಅವರನ್ನು ಕುರಿತು—"ವೀರರೇ, ನಿಮ್ಮ ರಾಜಪುತ್ರನೆಲ್ಲಿರುವನು?"

"ಸರದಾರ, ಅವರ ವಿಷಯವು ನಮಗೆ ಗೊತ್ತಿಲ್ಲ."

"ನಮ್ಮ ಮಿಥಿಲಾನಗರಿಯ ರಾಜಪುತ್ರಿಯ ವಿಷಯವಾದರೂ ನಿಮಗೆ ಗೊತ್ತಿದೆಯೇ?"

"ಅದೂ ನಮಗೆ ಗೊತ್ತಿಲ್ಲ."

ಸೇನಾಪತಿಗೆ ಬಹಳ ಕೋಪಬಂದಿತು. ಅವನು ಕೆಂಗಿಡಿಗಳನ್ನುಕಾರುವ ಕಣ್ಣುಗಳಿಂದ—"ಎಲೈ, ನೀವು ನಿಜವಾಗಿಯೂ ಸುಳ್ಳು ಹೇಳುವಿರಿ. ನಿಜವಾದ ಸಂಗತಿಯನ್ನು ಬಚ್ಚಿಡುವಿರಾ? ತಡೆಯಿರಿ ನಿಮಗೆ ಚನ್ನಾಗಿ ಶಾಸನ ಮಾಡಿಸುತ್ತೇನೆ" ಎಂದನು.

"ನೀವು ಬೇಕಾದ ಶಾಸನ ಮಾಡಿರಿ. ಅದಕ್ಕೆ ನಾವೇನೂ ಅಂಜುವಹಾಗಿಲ್ಲ. ನಾವು ನಿಮ್ಮ ಕೈಯಲ್ಲಿ ಸಂಪೂರ್ಣವಾಗಿ ಸಿಲುಕಿರುವೆವು. ಇನ್ನು ನೀವು ಬಾಯಿಯಿಂದ ಅನ್ನುವದರಲ್ಲಿ ಅರ್ಥವೇನು? ಇನ್ನೊಮ್ಮೆ ಹೇಳುತ್ತೇವೆ; ಈ ಕಾರಾಗೃಹದಲ್ಲಿ ಅವಮಾನಿತರಾಗಿ ಕೊಳೆಯುತ್ತ ಕುಳಿತುಕೊಳ್ಳುವದಕ್ಕಿಂತ ನಮಗೆ ಮರಣವೇ ಶ್ರೇಯಸ್ಕರವಾಗಿರುವದು! ನೀವು ಈಗಲೇ ನಮಗೆ ಮರಣ ದಂಡನೆಯನ್ನು ವಿಧಿಸಿದರೆ ಅದನ್ನು ಅನುಭವಿಸಲು ನಾವು ಸಂತೋಷದಿಂದ ಸಿದ್ಧರಾಗುವೆವು."

ಸೇನಾಪತಿಗೆ ಅವರ ಸ್ವಾಭಿಮಾನದ ವಿಷಯವಾಗಿ ಬಹಳ ಆಶ್ಚರ್ಯವಾಯಿತು. ಇದ್ದರೆ ಇಂಥ ಸ್ವಾಮಿಸೇವಕರಿರಬೇಕೆಂದು ಅವನು ಅಂದನು. ಆ ಮೇಲೆ ಅವನು ಶಾಂತಸ್ವರದಿಂದ ಅವರನ್ನು ಕುರಿತು—"ವೀರರೇ, ನಿಜ ಸಂಗತಿಯನ್ನು ಹೇಳಿಬಿಡಿರಿ. ಇನ್ನು ಬಚ್ಚಿಟ್ಟು ಉಪಯೋಗವಿಲ್ಲ. ರಾಜನಂದಿನಿಯು ಎಲ್ಲಿದ್ದರೂ ಅವಳನ್ನು ನಾವು ಹುಡುಕದೆ ಬಿಡಲಾರೆವು. ಹೇಳಿರಿ, ನಿಜವಾದ ಸಂಗತಿಯನ್ನು ಹೇಳಿರಿ."

"ಸೇನಾಪತಿಗಳೇ, ನಿಜವಾಗಿಯೂ ನಮಗೆ ನಮ್ಮ ರಾಜಪುತ್ರನ ವಿಷಯವಾಗಲಿ, ನಿಮ್ಮ ರಾಜಪುತ್ರಿಯ ವಿಷಯವಾಗಲಿ ಗೊತ್ತಿಲ್ಲ. ಸ್ವಯಂವರ ಮಂಟಪದಿಂದ ನಮ್ಮ ರಾಜಪುತ್ರನು ರಾಜನಂದಿನಿಯನ್ನು ಕರಕೊಂಡು ಹೊರಟುಹೋದನು. ಅಲ್ಲಿಂದ ನಾವು ಅವರನ್ನು ಬಹಳವಾಗಿ ಹುಡುಕಿದೆವು. ಇದುವರೆಗೂ ಅವರ ಸುದ್ದಿಲ್ಲ. ಅವರನ್ನು ಕಾಣದೆ ನಾವು ಬಹಳ ಚಡಪಡಿಸಿ, ನಮ್ಮ ದೇಶದ ಮಾರ್ಗವನ್ನು ಹಿಡಿದು ಸಾಗಿರಲು, ನಿಮ್ಮಿಂದ ಈ ಸ್ಥಿತಿಯನ್ನು ಹೊಂದಿದೆವು. ಇದಕ್ಕೂ ಹೆಚ್ಚಿಗೆ ನಮಗೇನೂ ಗೊತ್ತಿಲ್ಲ.

ಸೇನಾಧಿಪತಿಗೆ ಅವರಿಂದ ಹೆಚ್ಚಿಗೆ ಸಂಗತಿಯನ್ನು ತಿಳಿದುಕೊಳ್ಳುವದಾ ಗುವದಿಲ್ಲೆಂಬದು ಕಂಡುಬಂದಿತು. ಅವನು ಅವರನ್ನು ಅವರ ಮೊದಲಿನ ಸ್ಥಳಕ್ಕೆ ಕಳಿಸಿ ಆ ಮೇಲೆ ಅತ್ತಿತ್ತ ಅಡ್ಡಾಡುತ್ತ ವಿಚಾರಿಸಹತ್ತಿದನು. ಕೆಲವು ಹೊತ್ತಿನ ಮೇಲೆ ಅವನು ಮನದಲ್ಲಿ ಏನೋ ನಿಶ್ಚಯಿಸಿ ತನ್ನ ಕೈಕೆಳಗಿನ ಅಧಿಕಾರಿಯನ್ನು ಕರೆಯಿಸಿದನು.

ಅಧಿಕಾರಿಯು ಬಂದು ಅವರಿಗೆ ಮುಜುರೆಮಾಡಿ ಕುಳಿತುಕೊಂಡನು. ಮತ್ತು ತನ್ನನ್ನು ಕರೆಸಿದ ಕಾರಣವೇನೆಂದು ಕೇಳಿದನು.

ಸೇನಾಪತಿ"—ನಾನು ಗುಪ್ತವೇಷದಿಂದ ಕಂದಹಾರಕ್ಕೆ ಹೋಗುವೆನು. ನೀನು ಯಾವದಕ್ಕೂ ಕೊರತೆ ಬಾರದಂತೆ ಸೈನ್ಯದಲ್ಲಿ ವ್ಯವಸ್ಥೆ ಕಾಯ್ದುಕೊಂಡು ನಾನು ಬರುವವರೆಗೂ ಇಲ್ಲಿಯೇ ಇರಬೇಕು."

"ಅಪ್ಪಣೆಯಂತೆ ನಡೆಯಲು ಸೇವಕನು ಸಿದ್ಧನಿರುವನು."

"ಮತ್ತೊಂದು ಮಾತೆಂದರೆ, ನೀನು ಈ ಸಂಗತಿಯನ್ನು ಯಾರ ಎದು ರಿಗೂ ಹೇಳಬೇಡ. ನನ್ನ ಸಂಗಡ ಕೆಲವು ವಿಶ್ವಾಸುಕ ಗುಪ್ತಹೇರರನ್ನೂ ಕರ ಕೊಂಡು ಹೋಗುವೆನು. ಅವರ ಸಹಾಯದಿಂದ ನನ್ನ ಸ್ವಾಮಿಕಾರ್ಯವನ್ನು ಸಾಧಿಸಿಕೊಂಡು ಬರುವೆನು."

ಅಧಿಕಾರಿಯು ಅದಕ್ಕೊಪ್ಪಿ ತನ್ನ ಬಿಡಾರಕ್ಕೆ ಹೋದನು. ಅಫಗಾನ ರಾಜಕುಮಾರನು ರಾಜಕುವರಿಯನ್ನು ಕರೆದುಕೊಂಡು ಕಂದಹಾರಕ್ಕೆ ಹೋಗಿರ ಬಹುದೆಂದು ತರ್ಕಿಸಿ, ಸೇನಾಪತಿಯು ಕಂದಹಾರಕ್ಕೇ ಸಾಗಿದನು. ಅಫಗಾನ ರನ್ನು ದಾರಿಸಿಕ್ಕತ್ತ ಓಡಿಸಿದ ಆತನ ಕ್ಷಾತ್ರತೇಜಸ್ಸು ಧನ್ಯವಾದದ್ದೇ ಸರಿ!

---

## ೧೫ನೆಯ ಪ್ರಕರಣ—ನಿರಾಶೆ.

ಇಂದು ಕಂದಹಾರದಲ್ಲಿ ಭಯಂಕರವಾದ ಗೊಂದಲ; ಯುದ್ಧದಲ್ಲಿ ಸೋತ ಅಫಗಾನ ಸೈನಿಕರು ಬಂದಿರುವರು. ರಾಜಪುತ್ರನು ಬಾರದ್ದರಿಂದ ರಾಜಪರಿ ವಾರದಲ್ಲಿ ಬಹಳ ಗೊಂದಲವೆದ್ದಿತು.

ವೃದ್ಧ ಅಫಗಾನರಾಜನು ತನ್ನ ಮಗನ ಈ ಕೃತ್ಯಕ್ಕಾಗಿ ಬಹಳ ಸಂತಾಪ ಗೊಂಡಿದ್ದನು. ಆದ್ದರಿಂದವನು ತನ್ನ ಮಗನನ್ನು ಅನುಸರಿಸಿಹೋದ ಸೈನಿಕರಿಗೆ ಚನ್ನಾಗಿ ಶಿಕ್ಷಿಸಿದನು. ಆದರೆ ಅವನ ಸಂತಾಪವು ಬಹಳ ಹೊತ್ತಿನ ವರೆಗೆ ಉಳಿಯಲಿಲ್ಲ. ಮಗನ ಮೋರೆ ನೋಡದ್ದರಿಂದ ಅವನ ಮನವು ಬಹಳ ತಲ್ಲಣಿಸಿತು. ಅವನು ಬಹಳ ವ್ಯಾಕುಲನಾಗಿ ತನ್ನ ಅಂತಃಪುರದ ಮಹಡಿಯ ಮೇಲೆ ಕುಳಿತುಕೊಂಡಿದ್ದನು. ಆಗ ಅವನ ದೃಷ್ಟಿಯು ಎದುರಿಗಿನ ಮಾರ್ಗದ ಕಡೆಗೆ ಬಿತ್ತು. ಆ ಮಾರ್ಗದಲ್ಲಿ ಓರ್ವ ವೃದ್ಧ ಫಕೀರನು ಕೋಲನ್ನು ಹಿಡಿದುಕೊಂಡು ಹೋಗುತ್ತಿದ್ದನು.

ಅರಸನಿಗೆ ಅವನನ್ನು ನೋಡಿದ ಕೂಡಲೇ ಏನಾಯಿತೋ ತಿಳಿಯದು. ಕೂಡಲೆ ಅವನನ್ನು ಕರೆಸಿದನು. ಫಕೀರನು ಪದ್ಧತಿಯಂತೆ ರಾಜಸನ್ಮಾನ ಮಾಡಿ ಕುಳಿತುಕೊಂಡನು.

"ನೀವು ಯಾವ ಊರವರು?" ಎಂದು ಅರಸನು ಪ್ರಶ್ನೆಮಾಡಿದನು.

"ಇಲ್ಲಿಂದ ಆರು ಹರದಾರಿಯ ಮೇಲೆ ಒಂದು ಸಣ್ಣ ಹಳ್ಳಿಯದೆ. ಆ ಊರಲ್ಲಿ ನಾನೂ ನನ್ನ ಹೆಂಡರು-ಮಕ್ಕಳೂ ಇರುತ್ತಿದ್ದೆವು. ಒಂದು ಭಯಂಕರವಾದ ಬೇನೆಯಿಂದ ನನ್ನ ಹೆಂಡತಿಯು ಈಗೆರಡು ವರ್ಷಗಳ ಹಿಂದೆ ತೀರಿಕೊಂಡಳು. ನಾನೊಬ್ಬನೇ ನನ್ನ ಮಕ್ಕಳನ್ನು ಸಂರಕ್ಷಿಸುತ್ತ ಇದ್ದೆನು. ಆದರೆ ಅಲ್ಲಾನ ಮನಸ್ಸಿಗೆ ಅದೂ ಬರಲಿಲ್ಲ. ಅವನು ನನ್ನ ಮಕ್ಕಳನ್ನೂ ಕೂಡ ತನ್ನ ಕಡೆಗೆ ಕರಕೊಂಡು ಬಿಟ್ಟನು. ಹೆಂಡರು-ಮಕ್ಕಳನ್ನು ಕಳಕೊಂಡು ನಾನು ಈಗ ಇಲ್ಲಿಯೇ ವಾಸಿಸಿ ಭಿಕ್ಷಾಟನ ಮಾಡಿ, ಹೊಟ್ಟೆತುಂಬಿಕೊಳ್ಳುತ್ತೇನೆ" ಎಂದನು.

ಒಂದು ಕೇಳಿದರೆ ಹಾಳುರಗಳೆಯನ್ನು ಹಚ್ಚಿದ ಆ ಫಕೀರನನ್ನು ನೋಡಿ ಅರಸನಿಗೆ ಅವನ ದಡ್ಡತನಕ್ಕಾಗಿ ನಗೆ ಬಂದಿತು. ಆದರೆ ಅವನು ದುಃಖದಿಂದ ಹೀಗೆ ಮಾತಾಡುತ್ತಿರಬಹುದೆಂದು ತಿಳಿದು ಪುನಃ ಅವನನ್ನು ಕುರಿತು—ನಿಮ್ಮ ಕಷ್ಟಗಳನ್ನು ಕೇಳಿ ನನಗೆ ಬಹು ಖೇದವೆನಿಸುತ್ತದೆ. ಎಲ್ಲವೂ ದೇವರ ಇಚ್ಛೆಯಿದ್ದಂತಾಗುವದು. ಆದಿರಲಿ. ನಿಮಗೆ ಯಾವ ವಿದ್ಯೆ ಬರುವದು?

"ನನಗೆ ಸ್ವಲ್ಪ ರಮಲದ ಅಭ್ಯಾಸವಿರುವದು. ಹಾಗು ಸಾಮುದ್ರಿಕ ಬರುವದು ಇದರಿಂದಲೇ ನಾನು ನನ್ನ ಹೊಟ್ಟೆಹೊರಕೊಳ್ಳುತ್ತೇನೆ."

ಆಗ ಅರಸನು "ಹಾಗಾದರೆ ಇಗೋ, ನನ್ನ ಕೈಯನ್ನು ನೋಡಿರಿ,

ನನ್ನನ್ನು ಈಗ ಯಾವಚಿಂತೆಯು ಆವರಿಸಿರುವದು.''

ಫಕೀರನು ಕೂಡಲೇ ಅವನ ಕೈಯನ್ನು ನೋಡಹತ್ತಿದನು. ಬಹು ಹೊತ್ತಿನವರೆಗೆ ಅದನ್ನು ನೋಡಿದ ಮೇಲೆ ಅರಸನ ಮುಖವನ್ನು ಒಂದೆರಡು ಸಾರೆ ನೋಡಿದನು. ಆ ಮೇಲೆ ತನ್ನ ಕೈಬೆರಳುಗಳಿಂದ ಏನೇನೋ ಎಣಿಸ ಹತ್ತಿದನು. ಆಗ ಅರಸನು ಅವನ ಕಡೆಗೆ ಒಳ್ಳೇ ಕುತೂಹಲ, ಪೂರ್ಣದೃಷ್ಟಿ ಯಿಂದ ನೋಡುತ್ತಿದ್ದನು. ಫಕೀರನು ಅವನನ್ನು ಕುರಿತು—ನಿಮ್ಮ ಚಿಂತೆಯು ಬಹು ಭಯಂಕರವಾದದ್ದಿದೆ. ನಿಮ್ಮ ಅತಿಸಮೀಪದ ಸಂಬಂಧಿಕರಾರೋ ನಿಮ್ಮನ್ನಗಲಿದಂತೆ ತೋರುತ್ತದೆ. ಅರಸನು ಮತ್ತಿಷ್ಟು ಸಮೀಪಕ್ಕೆ ಬಂದು ಉತ್ಸುಕತೆಯಿಂದ ಅವನ ಮಾತನ್ನು ಕೇಳಹತ್ತಿದನು. ಫಕೀರನು ಮತ್ತೆ— ,,ಅವರು ಅಗಲಿ ಸ್ವಲ್ಪ ದಿನಗಳಾದಂತೆ ತೋರುತ್ತದೆ. ಎಂದು ನುಡಿದು ಸುಮ್ಮನಾದನು.''

ಅರಸನಿಗೆ ಫಕೀರನ ಮಾತಿನಿಂದ ಸ್ವಲ್ಪ ಸಮಾಧಾನವಾಯಿತು. ಅವನು ಪುನಃ ಫಕೀರನನ್ನು ಕುರಿತು—,,ಅವನು ಎತ್ತ ಹೋಗಿರುವನೆಂದು ನಿಮ್ಮ ನಂಬಿಗೆಯುದೆ?'' ಎಂದು ಕೇಳಿದನು.

ಆಗ ಫಕೀರನು ಕಾಗದವನ್ನು ತರಲಿಕ್ಕೆ ಹೇಳಿದನು. ಅರಸನ ಅಪ್ಪಣೆ ಯಂತೆ ಒಂದು ಕಾಗದವನ್ನು ಸೇವಕನು ಫಕೀರನ ಎದುರಿಗೆ ತಂದಿರಿಸಿದನು. ಫಕೀರನು ತನ್ನ ಹತ್ತರಿದ್ದ ಲೆಕ್ಕಣಿಕೆಯಿಂದ ಅದರ ಮೇಲೆ ಕೆಲವು ಚೌಕಾದ ಮನೆಗಳನ್ನು ಬರೆದು, ಮತ್ತೆ ಆ ಮನೆಗಳಲ್ಲಿ ಏನೇನೋ ಬರೆದನು. ಆ ಮೇಲೆ ಅರಸನಿಗೆ ಆ ಮನೆಗಳಲ್ಲಿ ಒಂದನ್ನು ಮುಟ್ಟಲಿಕ್ಕೆ ಹೇಳಿದನು. ಅರಸನು ಅದ ರಂತೆ ಒಂದು ಮನೆಯನ್ನು ಮುಟ್ಟಿದನು.

ಕೂಡಲೇ ಫಕೀರನು ಅವನನ್ನು ಕುರಿತು—ನಿಮ್ಮ ಆಪ್ತನು ಇಲ್ಲಿಂದ ಪೂರ್ವಕ್ಕೆ ಹೋಗಿರುವನೆಂದು ನಮ್ಮ ಗಣಿತವು ಹೇಳುತ್ತದೆ. ಎಂದನು.

ಅರಸನಿಗೆ ಫಕೀರನ ಮೇಲೆ ಪೂರ್ಣ ವಿಶ್ವಾಸವು ಕುಳಿತುಕೊಂಡಿತು. ಅವನು ಒಂದು ನೂರು ಚಿನ್ನದ ನಾಣ್ಯಗಳನ್ನು ತಂದು ಅವನೆದುರಿಗೆ ಸುರುವಿದನು.

ಫಕೀರನು ಅವುಗಳನ್ನು ನೋಡಿ,—''ಇವುಗಳನ್ನು ತಕ್ಕೊಂಡು ನಾನೇನು ಮಾಡಲಿ?'' ಎಂದನು.

"ನಿಮ್ಮ ಮನಸ್ಸಿಗೆ ಬಂದದ್ದನ್ನು ಮಾಡಬಹುದು." ಎಂದು ಅರಸನು ಉತ್ತರಕೊಟ್ಟನು.

"ಭಿಕ್ಷುಕನಾದ ನನಗೆ ಇವುಗಳಿಂದ ಉಪಯೋಗವಿಲ್ಲ. ಸಂಪತ್ತುಗಳಿಸಿ ಸುಖೋಪಭೋಗಮಾಡಬೇಕೆಂದು ನನ್ನ ಮನಸ್ಸಿದ್ದರೆ ನಾನು ಹೀಗೆ ಫಕ್ಕೀರನಾಗಿ ತಿರುಗುತ್ತಿರಲಿಲ್ಲ. ಸಂಸಾರದಿಂದ ಒಮ್ಮೆ ನಿವೃತ್ತನಾದ ನನಗೆ ಪುನಃ ಈ ಧನದ ಮೇಲೆ ಮೋಹವು ಉತ್ಪನ್ನವಾಗಲಾರದು."

"ಮಹಾತ್ಮನ್, ತಾವು ದೊಡ್ಡವರಿರುತ್ತೀರಿ. ಆದರೂ ನನ್ನ ಆಗ್ರಹದಿಂದ ಇದರಲ್ಲಿಯ ಸ್ವಲ್ಪ ಭಾಗವನ್ನಾದರೂ ತಕ್ಕೊಳ್ಳಬೇಕು."

ಅರಸನ ಆಗ್ರಹದಿಂದ ಅವನು ಒಂದೇ ನಾಣ್ಯವನ್ನು ತಕ್ಕೊಂಡು ತನ್ನ ಕಫನಿಯ ಜೇಬಿನಲ್ಲಿ ಹಾಕಿಕೊಂಡನು. ಮತ್ತು ಅರಸನನ್ನು ಕುರಿತು— ನಾನು ಹೇಳಿದ ಸಂಗತಿಯು ಸ್ವಲ್ಪಾದರೂ ನಿಜವಿದೆಯೋ? ಎಂದನು.

ನಿಜವಿರದೇನು ಮಾಡೀತು? ತಮ್ಮಂಥ ಮಹಾತ್ಮರ ಮುಖದಿಂದ ಹೊರಟ ವಾಣಿಯು ಸುಳ್ಳಾಗಬಹುದೆ? ಎಂದು ಅರಸನು ನುಡಿದನು.

ಆ ಮೇಲೆ ಫಕೀರನು ಹೊರಡಲುದ್ಯುಕ್ತನಾದನು. ಆಗ ಅರಸನು ಅವನನ್ನು ತಡೆದು ಇಂದಿನ ದಿನ ಇಲ್ಲಿಯೇ ಉಣ್ಣಬೇಕೆಂದು ಆಗ್ರಹ ಮಾಡಿದನು. ಅದಕ್ಕೆ ಆ ಫಕೀರನು ಒಪ್ಪಲಿಲ್ಲ. ಅರಸನು ಬಿಡಲೊಲ್ಲನು. ಫಕೀರನು ಬರಲೊಲ್ಲನು. ಬಳಿಕ ಅರಸನೇ ಬೇಸತ್ತು, ನಾಳೆ ಇಲ್ಲಿಗೆ ಪುನಃ ಬರಬೇಕೆಂದು ಹೇಳಿದನು.

ಅರಸನಿಂದ ಅಪ್ಪಣೆಹೊಂದಿ ಫಕೀರನು ಹೊರಬಿದ್ದನು. ತನ್ನನ್ನು ಯಾರಾದರೂ ಸೂಕ್ಷ್ಮರೀತಿಯಿಂದ ನಿರೀಕ್ಷಿಸುತ್ತಿರುವರೋ ಎಂದು ಅವನು ಸಂಶಯಪಡತೊಡಗಿದನು. ಅವನ ಮೈಮೇಲೆ ಅಷ್ಟೇನು ಬೆಲೆಯುಳ್ಳ ಅರಿವೆಗಳಿರದಿದ್ದರೂ ಅವನ ಮುಖಕಾಂತಿಯು ಮಾತ್ರ ಒಳ್ಳೇ ಗಂಭೀರವಾಗಿತ್ತು. ಅವನು ಕಂದಹಾರದ ಅರಸನ ಸಂಪತ್ತನ್ನು ನೋಡುತ್ತ ಆಶ್ಚರ್ಯಬಡುತ್ತ ಸಾಗಿದಂತೆ ತೋರಿದನು. ಅವನಂಥ ಸಾವಿರಾರು ಭಿಕ್ಷುಕರು ದಾರಿಯಲ್ಲಿ ತಿರುಗುವಾಗ ಅವನನ್ನು ಯಾರು ಕೇಳಬೇಕು? ಆದರೂ ಅವನು ಪುನಃ ತಿರುತಿರುಗಿ ನೋಡುತ್ತಲೇ ಇದ್ದನು.

ಆ ಪಟ್ಟಣವನ್ನು ನೋಡಲಕ್ಕೆ ಅವನ ಕಣ್ಣುಗಳು ಅತ್ಯುತ್ಸುಕವಾದಂತೆ

ತೋರುತ್ತಿದ್ದವು. ಇದರ ಮೇಲಿರದ ಅವನು ಆ ಪಟ್ಟಣಕ್ಕೆ ಹೊಸಬನೆಂದು ಜಾಣರಿಗೆ ತಟ್ಟನೆ ಹೊಳೆಯುತ್ತಿತ್ತು. ಆತನು ಬಹು ಕೌತುಕದಿಂದ ಆ ಪಟ್ಟಣವನ್ನೆಲ್ಲ ಅಡ್ಡಾಡಿ ನೋಡಿದನು.

ಅವನು ಒಂದು ಓಣಿಯಲ್ಲಿ ನಡೆದಿರಲು ಒಂದು ಕಡೆಯಲ್ಲಿ ಕೆಲವುಜನ ಸೈನಿಕರು ನಿಂತು ಮಾತಾಡುತ್ತಿರುವಂತೆ ಅವನಿಗೆ ಭಾಸವಾಯಿತು. ಕೂಡಲೇ ಅವನು ಅಲ್ಲಿಯೇ ಸಮೀಪದಲ್ಲಿರುವ ಒಂದು ಮನೆಗೆ ಹೋಗಿ ಭಿಕ್ಷೆಬೇಡುವ ನಿಮಿತ್ತದಿಂದ ನಿಂತುಕೊಂಡನು. ಆದರೆ ಭಿಕ್ಷೆಯ ಕಡೆಗೆ ಅವನ ಲಕ್ಷ್ಯವಿರಲಿಲ್ಲ; ಸೈನಿಕರು ಮಾತಾಡುವ ಮಾತಿನ ಕಡೆಗೆ ಅವನ ಲಕ್ಷ್ಯವಿದ್ದಂತೆ ತೋರಿತು. ಸೈನಿಕರು ಮಾತಾಡುವ ಶಬ್ದಗಳಾದರೂ ಸ್ಪಷ್ಟವಾದವುಗಳಿದ್ದಿಲ್ಲ. ಅಂಥವುಗಳನ್ನೇ ಈ ಫಕೀರನು ಕೇಳಲಿಕ್ಕೆ ಉತ್ಸುಕನಾದದ್ದರಲ್ಲಿ ಗೂಢವೇನಿರಬಹುದು?

ತುಸಹೊತ್ತಿನ ಮೇಲೆ ಒಳಗಿನಿಂದ ಓರ್ವ ಹೆಣ್ಣುಮಗಳು ಭಿಕ್ಷೆಹಾಕಲಿಕ್ಕೆ ಬಂದಳು. ಆದರೆ ಫಕೀರನು ಏನೇನೋ ಹುಡುಕುವನಂತೆ ನಟಿಸುತ್ತ ಆ ಹೆಣ್ಣುಮಗಳನ್ನು ನೋಡದವನಂತೆ ನಿಂತುಬಿಟ್ಟನು. ಆಗ ಅವನ ನಟನೆಯು ಬಹು ಚಮತ್ಕಾರಿಕವಾದದ್ದಿತ್ತು. ಅವನ ಮುಖದ ಲಕ್ಷಣವು, ಅವನು ಯಾವುದೋ ವಸ್ತುವನ್ನು ಕಳಕೊಂಡಂತೆ ತೋರುತ್ತಿತ್ತು. ಆದರೆ ಸೈನಿಕರ ಮಾತನ್ನು ಆಲಿಸಿ ಕೇಳುವ ಅವನ ಕುತೂಹಲವು ಸ್ವಲ್ಪವೂ ಕಡಿಮೆಯಾಗಿದ್ದಿಲ್ಲ.

ಆ ಹೆಣ್ಣುಮಗಳು ಬಹಳ ಹೊತ್ತು ನಿಲ್ಲಲಾರದೆ ಫಕೀರನನ್ನು ಕುರಿತು— "ಬಾವಾಜೀ ಭಿಕ್ಷೆಯನ್ನು ಹಿಡಿ'' ಎಂದಳು. ಆಗ ಅವನು ಎಚ್ಚತ್ತವನಂತೆ ನಟಿಸುತ್ತ ಭಿಕ್ಷೆಯನ್ನು ಹಾಕಿಸಿಕೊಂಡು ಮತ್ತೆ ಏನನ್ನೋ ಹುಡುಕುತ್ತ ನಿಂತನು. ಆದರೆ ಆ ಸೈನಿಕರೆಲ್ಲ ಹೋದದ್ದರಿಂದ ಅವನೂ ಹೋಗಹತ್ತಿದನು.

ಕೆಲ ಹೊತ್ತಿನ ಮೇಲೆ ಅವನು ಮತ್ತೊಂದು ಓಣಿಗೆ ಬಂದನು. ಅಲ್ಲಿ ಓರ್ವ ಹಾವಾಡಿಗನು ಕೈಯಲ್ಲಿ ಪುಂಗಿಯನ್ನು ಹಿಡಕೊಂಡು ಹಾಡುತ್ತ ಹಾವನ್ನು ಆಡಿಸುತ್ತಿದ್ದನು. ಅದನ್ನು ನೋಡಲಿಕ್ಕೆ ನೂರಾರು ಜನರು ನೆರೆದಿದ್ದರು. ಅದನ್ನು ನೋಡಲಿಕ್ಕೆ ಈ ಫಕೀರನೂ ಹೋದನು.

ಹಾವಾಡಿಗನು ಪುಂಗಿಯನ್ನು ಊದುತ್ತ ಜನರನ್ನು ನೋಡುತ್ತ ಅಂಗಳದ ಮಧ್ಯದಲ್ಲಿ ಕುಣಿಯುತ್ತಿದ್ದನು. ಆಗ ಅವನು ಈ ಫಕೀರನು ಬಂದದ್ದನ್ನು ನೋಡಿ ಪುಂಗಿಯ ಊದುವದನ್ನು ಜೋರುಮಾಡಿದನು. ಅತಿ ಉತ್ಸುಕತೆ

ಯಿಂದ ಫಕೀರನು ಆ ಪುಂಗಿಯ ಸ್ವರವನ್ನು ಕೇಳುತ್ತಿದ್ದನು. ಎಷ್ಟೋ ಹೊತ್ತಿನವರೆಗೆ ಅವನು ಪುಂಗಿಯನ್ನು ಊದಿದನು. ಅದನ್ನು ಕೇಳುತ್ತ ಹೋದಂತೆ ಫಕೀರನ ಮೋರೆಯು ಕಪ್ಪಿಡಹತ್ತಿತು. ತುಸ ಹೊತ್ತಿನ ಮೇಲೆ ಫಕೀರನು ಅಲ್ಲಿಂದ ಹೊರಟನು. ಹಾವಾಡಿಗನಾದರೂ ತನ್ನ ಆಟವನ್ನು ಮುಗಿಸಿ ಬಂದಷ್ಟು ದುಡ್ಡು ತಕ್ಕೊಂಡು ಫಕೀರನು ಹೋದ ಮಾರ್ಗವನ್ನು ಬಿಟ್ಟು ಮತ್ತೊಂದು ಮಾರ್ಗವನ್ನು ಹಿಡಿದು ಹೊರಟನು.

ಫಕೀರನು ಎಷ್ಟೋ ಹೊತ್ತಿನವರೆಗೆ ದಾರಿಯನ್ನು ನಡೆದು ಊರಹೊರಗಿನ ಒಂದು ಮುರಕ ಮನೆಗೆ ಬಂದು, ತನ್ನ ಗಂಟುಗದಡಿಗಳನ್ನಿರಿಸಿದನು. ಆ ಮನೆಯು ಛದ್ರುವಿರದ್ದರಿಂದ ಮಳೆಯು ಬಂದರೆ ನೀರೆಲ್ಲ ಒಳಗೇ ಬರುತ್ತಿತ್ತು. ಅಲ್ಲಲ್ಲಿ ಕಸದ ಗುಂಪಿಗಳು ಒಟ್ಟಿದ್ದವು. ಕಣ್ಣುಕಪ್ಪಡಿಗಳು ನಿರ್ಭಯವಾಗಿ ಆ ಸ್ಥಳದಲ್ಲಿ ವಾಸಿಸುತ್ತಿದ್ದವು. ಆ ಮನೆಯ ಸುತ್ತಲೂ ಗಿಡಗಳು ಬೆಳೆದದ್ದರಿಂದ ಇದು ಮನೆಯೆಂಬದು ಕೂಡ ಹೊಸಬರಿಗೆ ಕೂಡಲೆ ಗೊತ್ತಾಗುತ್ತಿದ್ದಿಲ್ಲ.

ಫಕೀರನು ಅಲ್ಲಿಯೇ ಬಿದ್ದ ಒಂದು ಹರಕ ಚಾಪೆಯನ್ನು ಉರುಳಿಸಿದನು. ಹೊತ್ತು ಮುಳುಗುತ್ತ ಬಂದದ್ದರಿಂದ ಮಾಡದಲ್ಲಿಯ ಪಣತಿಯನ್ನು ತಕ್ಕೊಂಡು ಅದನ್ನು ಹೊತ್ತಿಸಿದನು. ಆಮೇಲೆ ಹೊರಗಿನ ಬಾಗಿಲವಿಕ್ಕಿ ಚಿಲಕವನ್ನು ಹಾಕಿದನು. ಆಮೇಲೆ ಅವನು ತನ್ನ ಗಂಟನ್ನು ತಲೆಗಿಂಬಿಗೆ ಇಟ್ಟುಕೊಂಡು ಉಶ್ಶೆಂದು ಕುಳಿತುಕೊಂಡನು. ಅವನ ಮುಖವು ಬಹಳವಾದ ಚಿಂತೆಯಿಂದ ಆವರಿಸಿ ಹೋಗಿತ್ತು. ಅವನು ಮೇಲಿಂದಮೇಲೆ ನಿಟ್ಟುಸುರುಗಳನ್ನು ಬಿಡುತ್ತಿದ್ದನು. ವಾಚಕರೇ ಇದುವರೆಗಿನ ಫಕೀರನ ವೃತ್ತಾಂತದಿಂದ ನೀವು ಅವನ ವಿಷಯವಾಗಿ ಪೂರ್ಣ ಸಂಗತಿಯನ್ನು ತಿಳಿಯಲು ಆತುರರಾಗಿರಬಹುದು. ಸ್ವಲ್ಪ ಸಾವಧಾನರಾಗಿರಿ. ಎಲ್ಲವೂ ಗೊತ್ತಾಗುವದು.

ಹೀಗೆ ಅವನು ವಿಚಾರಮಗ್ನನಾಗಿರಲು, ಹೊರಗೆ ಯಾರೊ ಬಾಗಿಲ ಬಡಿದಂತೆ ತೋರಿತು. ಕೂಡಲೆ ಅವನು ಎದ್ದು ಹೋಗಿ ಆ ಸಪ್ಪಳವನ್ನು ಆಲಿಸಹತ್ತಿದನು. ಸಪ್ಪಳವು ಮತ್ತೆ ಕೇಳಿಸಹತ್ತಿತು. ಆಗ ಅವನು—"ಯಾರವರು?" ಎಂದು ಕೇಳಿದನು.

"ನಾನು ಅಜಿತಸಿಂಗ"ನೆಂಬ ಧ್ವನಿಯು ಹೊರಟಿತು.

ಕೂಡಲೇ ಫಕೀರನು ಬಾಗಿಲ ತೆರೆದು ಅವನನ್ನು ಕುರಿತು—ಅಜಿತಸಿಂಗ,

ಮತ್ತೇನು ಸುದ್ದಿಯು? ಎಂದು ಕೇಳಿದನು.

"ಇಲ್ಲಿ ಒಳಗೆ ಬನ್ನಿರಿ. ಎಲ್ಲವನ್ನೂ ಹೇಳುತ್ತೇನೆ. ವಿಶೇಷ ಸುದ್ದಿಯೇನೂ ಗೊತ್ತಾಗಿಲ್ಲ. ಹಾವಾಡಿಗರ ವೇಷದಲ್ಲಿ ನಿಮಗೆ ಪುಂಗಿಯ ದ್ವಾರದಿಂದ ತಿಳಿಸಿದ ಸಂಗತಿಯಷ್ಟೇ ನನಗೆ ಗೊತ್ತಿದೆ."

ಇವರ ಈ ಸಂಭಾಷಣದಿಂದ ಇವರಾರೆಂಬದು ನಮ್ಮ ಚಾಣಾಕ್ಷ ವಾಚಕರಿಗೆ ಗೊತ್ತಾಗಿರಬಹುದು. ಫಕೀರನ ವೇಷವನ್ನು ಧರಿಸಿದವನು ನಮ್ಮ ಮಿಥಿಲಾ ನಗರದ ಸೇನಾಧಿಪತಿಯು. ಹಾವಾಡಿಗನ ವೇಷವನ್ನು ಧರಿಸಿದವನು ಮಿಥಿಲಾಸೇನೆಯಲ್ಲಿದ್ದ ಓರ್ವ ಪ್ರಸಿದ್ಧ ಗುಪ್ತಹೇರನು. ಸೇನಾಧಿಪತಿಗೆ ಗುಪ್ತಹೇರನ ಕೆಲಸವು ಚನ್ನಾಗಿ ಸಾಧಿಸಿತ್ತು.

ಸೇನಾಪತಿಯು—"ಅಜಿತಸಿಂಗ, ಇವತ್ತಿನ ನನ್ನ ವೇಷವು ಚನ್ನಾಗಿ ಸಾಧಿಸಿತು. ನಾನು ರಾಜಪ್ರಾಸಾದದ ಮುಂದೆ ಸಾಗಿರಲು, ರಾಜನು ನನ್ನನ್ನು ಕರೆಸಿದನು. ಅವನು ನನ್ನನ್ನು ಕರೆಸಿದ ಕೂಡಲೆ ನನ್ನ ಎದೆಯು ಧಸ್ಸೆಂದಿತು. ಅರಸನು ನನ್ನ ಗುಪ್ತವೇಷವನ್ನು ಕಂಡುಹಿಡಿದಿರಬಹುದೆಂದು ಬಗೆದೆನು. ಆದರೂ ಧೈರ್ಯವ ತಂದುಕೊಂಡು ಅರಸನಿಗೆ ಮಾಡುವ ಪದ್ಧತಿಯಂತೆ ಮುಜುರೆ ಮಾಡಿದೆನು. ಕೂಡಲೆ ಅವನು ನನಗೊಂದು ಉಚಿತಾಸನವನ್ನು ಕೊಟ್ಟನು. ಆಗ ನನಗೆ ಜೀವದಲ್ಲಿ ಜೀವ ಬಂದಂತಾಯಿತು. ಫಕೀರರ ವಿಷಯಕ್ಕಿದ್ದ ಅವನ ಪ್ರೇಮವನ್ನು ನೋಡಿ ನನಗೆ ಸಂತೋಷವಾಯಿತು.

ನಾನು ಅವನ ಅರಮನೆಯ ವೈಭವವನ್ನು ನೋಡಿ ಸಂತೋಷಿತನಾದೆನು. ಮುಸಲ್ಮಾನರು ವೈಭವಸಂಪನ್ನರಿರುವರೆಂಬದು ನನ್ನ ನಿದರ್ಶನಕ್ಕೆ ಬಂತು.

ಅವನೆದುರಿಗೆ ನಾನು ಭವಿಷ್ಯವಾದಿಯೆಂದು ಹೇಳಿದೆನು. ಅವನನ್ನು ನಾನು ನೋಡಲು ಮಾರ್ಗದಲ್ಲಿ ನಿಂತು ನೋಡಿದಾಗ್ಗೆ ಅವನ ಮುಖವು ಚಿಂತೆಯಿಂದ ಆವರಿಸಿತ್ತು. ಅವನ ಮಗನು-ಕಂದಹಾರದ ರಾಜಪುತ್ರನು ಬಂದಿರಲಿಕ್ಕಿಲ್ಲೆಂದು ತರ್ಕಿಸಿದ್ದೆನು. ಅವನು ಬಂದಿದ್ದರೆ ಅರಸನು ಆನಂದಿತನಾಗುತ್ತಿದ್ದನು. ಅದರಂತೆ ನಾನು ಅರಸನ ಕೈಯನ್ನು ನೋಡಿ ಅವನ ಚಿಂತೆಯ ಕಾರಣವನ್ನು ಹೇಳಿದೆನು.

ನನ್ನ ಯುಕ್ತಿಯು ಚನ್ನಾಗಿ ಸಾಧಿಸಿತೆಂದು ಪುನಃ ಹೇಳುವೆನು. ಅವನು ನನ್ನ ಮಾತು ನಿಜವಾಯಿತೆಂತಲೋ ಏನೋ ಸಂತೋಷಿತನಾದನು. ಆಗ

ನನಗೂ ಸಂತಸವಾಯಿತು. ಮತ್ತೆ ತರ್ಕದಿಂದ ಏನೇನೋ ಹೇಳಿದೆನು. ಅದೆಲ್ಲ ಅವನಿಗೆ ನಿಜವೆನಿಸಿತು. ರಾಜಪುತ್ರನು ಹಿಂದುಸ್ತಾನದಿಂದ ಬಂದಿರುವದಿಲ್ಲ. ಅದೇ ಚಿಂತೆಯಿಂದ ಆ ಮುದಿಅರಸನು ವಿಹ್ವಲನಾಗಿರುವನು.

ನನ್ನ ಮಾತಿನಿಂದ ಅವನಿಗೆ ನನ್ನ ಮೇಲೆ ಪೂರ್ಣ ವಿಶ್ವಾಸವು ಕುಳಿತು ಕೊಂಡಿತು. ಅವನು ನನ್ನನ್ನು ಅತಿಭಕ್ತಿಯಿಂದ ಕಾಣಹತ್ತಿದನು. ಅವನು ನಾನು ಹೇಳಿದ ಭವಿಷ್ಯದ ಪ್ರತಿಫಲವಾಗಿ ಒಂದುನೂರು ಬಂಗಾರದ ನಾಣ್ಯಗ ಳನ್ನು ತಂದು ಸುರುವಿದನು. ನನ್ನ ಉದ್ದೇಶವು ಆ ನಾಣ್ಯಗಳನ್ನು ತಕ್ಕೊಳ್ಳು ವದಿದ್ದಿಲ್ಲ. ಬರಿಯ ಗುಪ್ತಸಂಗತಿಯನ್ನು ತಿಳಕೊಳ್ಳುವದಿತ್ತು. ಆದ್ದರಿಂದ ನಾನು ದೊಡ್ಡ ಯೋಗಿಯಂತೆ ಆ ದ್ರವ್ಯವನ್ನು ತಿರಸ್ಕರಿಸಿದೆನು. ಬಳಿಕ ಕೇಳುವದೇನು? ಅರಸನ ಭಕ್ತಿಯು ನನ್ನ ಮೇಲೆ ಮೊದಲಿಗಿಂತಲೂ ದೃಢವಾಯಿತು. ನನ್ನ ನಟ ನೆಯೂ ಹಾವಭಾವಗಳೂ ಅವನನ್ನು ಸಂಪೂರ್ಣವಾಗಿ ಮರುಳುಗೊಳಿಸಿದವು.

ಆದರೆ ನನಗೆ ಅದೇವೇಳೆಯಲ್ಲಿ ಮತ್ತೊಂದು ಸಂಕಟವು ಬಂದೊದಗಿತು. ಊಟದ ಸಲುವಾಗಿ ಅರಸನು ನನಗೆ ಆಗ್ರಹ ಮಾಡಹತ್ತಿದನು. ನನಗೆ ಆ ಪ್ರಸಂಗದಿಂದ ಪಾರಾಗುವದು ಕಠಿಣವಾಯಿತು. ಕಡೆಗೆ ನಾಳೆ ಬರಲು ಒಪ್ಪಿ ಅಲ್ಲಿಂದ ಕಾಲ್ತೆಗೆದೆನು. ಬರುವಾಗ ನನ್ನ ವೇಷವನ್ನು ಯಾರಾದರೂ ಕಂಡು ಹಿಡಿಯುತ್ತಿರುವರೋ ಎಂದು ಸುತ್ತಲೂ ನೋಡುತ್ತ, ಪರೀಕ್ಷಿಸುತ್ತ ಬಂದೆನು.

ಆ ಮೇಲೆ ಮತ್ತೊಂದು ಓಣಿಗೆ ಬಂದೆನು. ಅಲ್ಲಿ ಕೆಲಸೈನಿಕರು ಗುಂಪಾಗಿ ನಿಂತಿದ್ದರು. ಅವರನ್ನು ನೋಡಿ ನಾನು ಅವರಿದ್ದೆಡೆಗೆ ಹೋದೆನು. ನನ್ನ ಕಲ್ಪ ನೆಯು ಮತ್ತಿಷ್ಟು ದೃಢವಾಯಿತು. ಅರಸುಮಗನು ಹಿಂದುಸ್ತಾನದಿಂದ ಬಂದಿ ಲ್ಲೆಂಬದು ನಿಜವಾಯಿತು. ಅರಸುಮಗನ ಸಂಗಡ ಹೋದದ್ದಕ್ಕೆ ಎಲ್ಲ ಸೈನಿಕ ರಿಗೆ ಶಿಕ್ಷೆಯಾಯಿತೆಂಬದನ್ನು ಅವರ ಬಾಯಿಂದ ಕೇಳಿಕೊಂಡೆನು. ಆ ಮೇಲೆ ನಿನ್ನೆಡೆಗೆ ಬಂದೆನು. ನೀನು ಪುಂಗಿಯಲ್ಲಿ ಊದಿ ನನಗೆ ತಿಳಿಸಿದಂತೆ ರಾಜಪುತ್ರಿಯು ವೃತ್ತಾಂತವು ಗೊತ್ತಾಗಲಿಲ್ಲವೆ? ಎಂದು ಕೇಳಿದನು.

“ಸರದಾರ, ರಾಜನಂದಿನಿಯು ಇಲ್ಲಿ ಇದ್ದರೆ ಅವಳ ವಿಷಯವು ಗೊತ್ತಾಗ ಬೇಕಷ್ಟೆ; ಅವಳನ್ನು ಹಿಂದುಸ್ತಾನದಿಂದ ಇಲ್ಲಿಗೆ ಕರತಂದಿಲ್ಲ; ನಾನು ಈ ಹಾವಾ ಡಿಗರ ವೇಷದಿಂದ ಅಂತಃಪುರದಲ್ಲಿ ಪ್ರವೇಶಿಸಿದೆನು. ಯಾವದಾದರೊಂದು ಆಟವು ಬಂದರೆ, ಇಲ್ಲಿ ಅದನ್ನು ಅಂತಃಪುರಕ್ಕೆ ರಾಜಸ್ತ್ರೀಯರ ಸಲುವಾಗಿ ಕರಕೊಂಡು

ಹೋಗುವ ಪರಿಪಾಠವಿದೆಯಂತೆ. ಆದರಂತೆ ಓರ್ವ ರಾಜದೂತನು ನನ್ನನ್ನು ಅಂತಃಪುರಕ್ಕೆ ಕರಕೊಂಡುಹೋದನು. ಕೆಲಸ ಸಾಧಿಸುವ ವೇಳೆಯು ಸಮೀಪಿಸಿತೆಂದು ನಾನು ಹಿಗ್ಗಿದೆನು. ಆ ಮೇಲೆ ಅಲ್ಲಿ ಆಟವನ್ನಾರಂಭಿಸಿದೆನು. ಎಲ್ಲರ ಕಡೆಗೂ ಸೂಕ್ಷ್ಮದೃಷ್ಟಿಯಿಂದ ನೋಡಹತ್ತಿದೆನು. ಅಲ್ಲಿ ರಾಜನಂದಿನಿಯು ಇದ್ದಿಲ್ಲ. ಆದ್ದರಿಂದ ನಿರಾಶನಾಗಿ ಇತ್ತ ಕಡೆಗೆ ಬಂದೆನು.''

''ರಾಜನಂದಿನಿಯು ನಿನ್ನ ಆಟವನ್ನು ನೋಡಲಿಕ್ಕೆ ಬರದೆ ಇದ್ದಳೆ?''

''ಈ ವಿಚಾರವನ್ನು ನಾನು ಮೊದಲೇ ಮಾಡಿದ್ದೆನು. ಆದ್ದರಿಂದ ಅಂತಃಪುರದ ಅತಿ ಪರಿಚಿತನಾದ ಓರ್ವ ಕಾವಲುಗಾರನ ಸ್ನೇಹಸಂಪಾದಿಸಿ ಅವನ ಬಾಯಿಂದ ರಾಜಪುತ್ರಿಯ ವಿಷಯಕವಾಗಿ ಎಲ್ಲ ಸಂಗತಿಯನ್ನು ತಿಳಕೊಂಡೆನು.''

''ಅವನೇನಂದನು?''

''ಅವನನ್ನುವದೇನು? ಇಲ್ಲಿಗೆ ಯಾವ ಸ್ತ್ರೀಯರೂ ಬಂದಿಲ್ಲೆಂದು ಹೇಳಿದನು. ಇಷ್ಟೇ ಅಲ್ಲ ರಾಜಪುತ್ರನೂ ಕೂಡ ಇಲ್ಲಿಗೆ ಬಂದಿಲ್ಲೆಂದು ನುಡಿದನು.''

ಅವರೀರ್ವರು ಹೀಗೆ ಮಾತಾಡುತ್ತ ಬಹಳ ಹೊತ್ತಿನ ವರೆಗೆ ಕುಳಿತರು. ಆಗ ಸೇನಾಧಿಪತಿಯ ಮನಸ್ಸಿಗೆ ಸ್ವಲ್ಪಾದರೂ ಶಾಂತಿಯಿದ್ದಿಲ್ಲ. ಅವನ ಮನವು ಉಕ್ಕೇರಿದ ಜಲಧಿಯಂತೆ ಹೊಯ್ದಾಡುತ್ತಿತ್ತು. ಆಗ ಅವನು ಅಜಿತಸಿಂಹನಿಗೆ ಮಲಗ ಹೇಳಿ ತಾನೊಬ್ಬನೇ ವಿಚಾರಿಸುತ್ತ ಕುಳಿತನು.

ಸುಮಾರು ಆರುತಾಸು ರಾತ್ರಿಯಾಗಿದೆ; ಶಾಂತತೆಯ ಸಾಮ್ರಾಜ್ಯವು ಎಲ್ಲಡೆಗೂ ಪಸರಿಸಿದೆ. ಕೃಷ್ಣಪಕ್ಷವಿದ್ದದರಿಂದ ಚಂದ್ರನ ದರುಶನವೇ ಇದ್ದಿಲ್ಲ. ನಿದ್ರಾದೇವಿಯು ಎಲ್ಲರ ಮೇಲೆಯೂ ತನ್ನ ಸಾಮರ್ಥ್ಯವನ್ನು ನಡಿಸಹತ್ತಿದ್ದಾಳೆ. ಸುತ್ತಲೂಬೆಳೆದ ಗಿಡದೊಳಗಿನ ಪಕ್ಷಿಗಳ ಕಿಲಿಬಿಲಿ ಮಾಡುವ ಸಪ್ಪಳದ ಹೊರತು ಏನೂ ಕೇಳಬರುತ್ತಿದ್ದಿಲ್ಲ ಇಂಥ ಪ್ರಶಾಂತವಾದ ಸಮಯದಲ್ಲಿ ಹೊರಗೆ ಯಾರೋ ಗುಜುಗುಜು ಮಾತಾಡಿದಂತೆ ಕಂಡುಬಂದಿತು.

ಆಗ ಸೇನಾಪತಿಗೆ ಬಹು ಆಶ್ಚರ್ಯವಾಯಿತು. ಇಂಥ ಪ್ರಶಾಂತವಾದ ಸಮಯದಲ್ಲಿ—ಈ ಕೃಷ್ಣಪಕ್ಷದ ಕಾರ್ಗತ್ತಲೆಯಲ್ಲಿ ನಿರ್ಮಾನುಷವಾದ ಈ ಸ್ಥಳಕ್ಕೆ ಯಾರು ಬಂದಿರಬಹುದೆಂದು ಯೋಚಿಸತೊಡಗಿದನು. ಆಗ ಅವನು ಬಾಗಿಲದಮರೆಗೆ ನಿಂತು ಅವರ ಮಾತುಗಳನ್ನು ಆಲಿಸಹತ್ತಿದನು. ಮಾರುತನ ಅನುಕೂಲತೆಯಿಂದ ಆ ಜನರು ಮಾತಾಡುವದು ಅವನಿಗೆ ಕೇಳಬರಹತ್ತಿತು.

ಅಲ್ಲಿ ಮಾತಾಡುವವರು ಇಬ್ಬರೇ ಇರುವರೆಂಬದು ಸೇನಾಪತಿಗೆ ತಿಳಿಯಿತು. ಅವರಲ್ಲಿ ಒಬ್ಬನು ಮತ್ತೊಬ್ಬನನ್ನು ಕುರಿತು—"ಇಲ್ಲಿ' ಮಲಗಿದವರು ನಿಜವಾಗಿ ಭಿಕ್ಷುಕರಲ್ಲ. ಭಿಕ್ಷುಕರಾಗಿದ್ದರೆ ಇಂಥ ಪ್ರದೇಶದಲ್ಲಿ ಇಷ್ಟು ಗುಪ್ತವಾಗಿ ಏಕೆ ಇರುತ್ತಿದ್ದರು? ಅದಿರಲಿ, ಇದುವರೆಗೆ ಇವರಾಡಿದ ಮಾತುಗಳಿಂದಲೇ ಇವರು ಹಿಂದುಸ್ಥಾನದ ಗುಪ್ತಹೇರರಿರುವರೆಂದು ತಿಳಿಯುತ್ತಿದೆ. ಆದ್ದರಿಂದ ಇವರ ಸುದ್ದಿಯನ್ನು ಅರಸನಿಗರುಹಿ, ಇವರನ್ನು ಬಂದಿಗಳನ್ನಾಗಿ ಮಾಡಬೇಕು. ಆ ಮೇಲೆ ಗುಪ್ತಹೇರರಾದ ನಮಗೆ ದೊಡ್ಡ ಅಧಿಕಾರವು ಸಿಗಬಹುದಾಗಿದೆ." ಎಂದು ನುಡಿದನು.

ಸೇನಾಪತಿಯು ಕೂಡಲೆ ಅಜಿತಸಿಂಗನನ್ನು ಮೆಲ್ಲಗೆ ಎಬ್ಬಿಸಿ, ಶಸ್ತ್ರಗಳನ್ನು ಕೈಯಲ್ಲಿ ತಕ್ಕೊಂಡನು. ಇನ್ನು ಹೊರಗಿನ ಗುಪ್ತಹೇರರು ಅರಸನೆದುರಿಗೆ ಸುದ್ದಿಯನ್ನರುಹಲು ಹೋಗತಕ್ಕವರು. ಅಷ್ಟರಲ್ಲಿ ಅವರಿಬ್ಬರೂ ಬಂದು ಅವರ ಕೂಡ ಕಾದಹತ್ತಿದರು. ಅಷ್ಟರಲ್ಲಿ ಹಿಂದೂವೀರರ ಖಡ್ಗಗಳಿಗೆ ಆ ಗುಪ್ತಹೇರರ ಶಿರಗಳು ಬಲಿಯಾದವು.

ಸೇನಾಪತಿಯೂ, ಅಜಿತಸಿಂಗನೂ ಒಳಗೆ ಬಂದು ಕುಳಿತರು. ಆಗ ಅಜಿತಸಿಂಗನು—"ಸರದಾರ, ಇಲ್ಲಿ ನಾವು ಬಂದ ಕೆಲಸವಾಯಿತು. ರಾಜನಂದಿನಿಯನ್ನು ಆ ದುಷ್ಟರು ಇಲ್ಲಿ ತಂದಿಲ್ಲವೆಂದು ಕಂಡುಬಂದಿತು. ಆದ್ದರಿಂದ ನಾವು ಇನ್ನು ಇಲ್ಲಿ ನಿಲ್ಲದೆ ಆದಷ್ಟು ಬೇಗನೇ ಈ ಸ್ಥಳವನ್ನು ಬಿಡುವದು ಹಿತಕರವು." ಎಂದು ನುಡಿದನು.

ಸೇನಾಪತಿಯಾದರೂ ಅದಕ್ಕೆ ಸಮ್ಮತಿಸಿದನು. ಹಾಗು ಅವನನ್ನು ಕುರಿತು—"ನಾವು ಈಗ ಬೆಳದಿಂಗಳು ಬಿದ್ದ ಕೂಡಲೇ ಹೊರಟು ನಮ್ಮ ಪಾಳಯವನ್ನು ಸೇರೋಣ. ಬಂದಹಾದಿಗೆ ಸುಂಕವಿಲ್ಲದಾಯಿತು. ಉಪಾಯವಿಲ್ಲ." ಎಂದು ನುಡಿದನು.

ಕೆಲಹೊತ್ತಿನ ಮೇಲೆ ಈ ದುಃಖಿಗಳಿಗೆ ಮಾರ್ಗ ತೋರಿಸಲು ಹಾತೊರೆಯುತ್ತಿರುವನೋ ಎಂಬಂತೆ ಚಂದ್ರನು ಗಗನಮಂಡಲವನ್ನು ವ್ಯಾಪಿಸಿದನು. ಅವನ ತಂಪಾದ ಕಿರಣಗಳು ಜಗದಲ್ಲಿ ಪಸರಿಸಿ, ಆ ಪ್ರಶಾಂತಸಮಯದಲ್ಲಿ ಜಗದ ಶೋಭೆಯನ್ನು ಹೆಚ್ಚಿಸ ಹತ್ತಿದವು. ಆಗ ಅವರೀರ್ವರೂ ಮೆಲ್ಲಗೆ ಊರ ದಾಟಿದರು. ಬಹುದೂರ ಅರಣ್ಯದಲ್ಲಿ ಒಂದು ಗುಪ್ತವಾದ ಸ್ಥಳದಲ್ಲಿ ಅವರು ತಮ್ಮ

ಕುದುರೆಗಳನ್ನಿಟ್ಟು ಒಬ್ಬ ಸೇವಕನನ್ನಿರಿಸಿದ್ದರು. ಅವರು ಕುದುರೆಯಿದ್ದಲ್ಲಿಗೆ ಹೋಗಿ ಅಲ್ಲಿದ್ದ ಸೇವಕನೊಡನೆ ಕುದುರೆಗಳನ್ನೇರಿ ನಿರಾಶೆಯಿಂದ ತಮ್ಮ ಪಾಳಯದ ಕಡೆಗೆ ಸಾಗಿದರು.

---

## ೧೪ನೆಯ ಪ್ರಕರಣ—ಈ ಶಬ್ದಗಳು ಯಾರವಾಗಿರಬಹುದು?

ಮಿಥಿಲಾ ಸೇನಾಧಿಪತಿಯು ಇಂದು ಡೇರೆಯಲ್ಲಿ ಬಹು ಚಿಂತಾಕ್ರಾಂತನಾಗಿ ಕುಳಿತಿದ್ದಾನೆ ಅವನೆದುರಿಗೆ ಅವನ ಕೈಕೆಳಗಿನ ಸರದಾರರು ಕುಳಿತಿದ್ದರು. ಅವರೂ ಚಿಂತಾಕ್ರಾಂತರಾಗಿದ್ದರು. ಮಿಥಿಲಾನಗರಿಯಿಂದ ಇಲ್ಲಿಯವರೆಗೆ ಬಂದದ್ದು ವ್ಯರ್ಥವಾದದ್ದಕ್ಕೆ ಅವರಿಗೆ ಬಹಳ ಅಸಮಾಧಾನವಾಯಿತು. ಪ್ರತಿಜ್ಞೆಯಂತೆ ಕಾರ್ಯವಾಗದ್ದಕ್ಕಾಗಿ ಅವರು ಬಹಳ ಹಳಹಳಿಸಿದ್ದರಲ್ಲಿ ಆಶ್ಚರ್ಯವೇನು? ಬಹಳ ಹೊತ್ತಿನವರೆಗೆ ಒಬ್ಬರ ಬಾಯಿಯಿಂದಲೂ ಮಾತುಗಳು ಹೊರಡಲಿಲ್ಲ. ಆಗ ಸೇನಾಧಿಪತಿಯು ತನ್ನೆದುರಿಗೆ ಕುಳಿತ ಸರದಾರರನ್ನು ಕುರಿತು—ವೀರರೇ, ಇದುವರೆಗೆ ನಾವು ಸ್ವಾಮಿಭಕ್ತಿಪ್ರೇರಿತರಾಗಿ ನಮ್ಮ ಕರ್ತವ್ಯವನ್ನು ಚನ್ನಾಗಿ ಮಾಡಿದೆವು. ಆದರೆ ನಮ್ಮ ಕರ್ತವ್ಯಕ್ಕೆ ದೇವರು ಯಶಸ್ಸನ್ನು ದಯಪಾಲಿಸಲಿಲ್ಲ! ಉಪಾಯವಿಲ್ಲ. ಕರ್ತವ್ಯವನ್ನು ಮಾಡುವದಷ್ಟು ನಮ್ಮ ಕೆಲಸ. ಇನ್ನು ಮುಂದೆ ನಾವು ಏನು ಮಾಡಬೇಕೆಂಬದನ್ನು ಈಗ ನಿಶ್ಚಯಿಸಬೇಕಾಗಿದೆ. ಎಂದು ನುಡಿದನು.

ಅದಕ್ಕೆ ಅವರಲ್ಲೋರ್ವ ಪ್ರಮುಖ ವೀರನು—ಸರದಾರ, ಇನ್ನು ನಮಗೆ ರಾಜಪುತ್ರಿಯು ದೊರೆಯುವ ಆಶೆಯಿಲ್ಲ. ನಾವು ಮಿಥಿಲೆಯನ್ನು ಬಿಟ್ಟು ಬಹು ದಿನಗಳಾದವು. ಆದ್ದರಿಂದ ಇನ್ನು ತಿರುಗಿ ಹೋಗುವದು ಲೇಸು. ಇದಕ್ಕೂ ಹೆಚ್ಚು ನಮಗೇನೂ ತಿಳಿಯುವದಿಲ್ಲ. ಎಂದನು.

ಸೇನಾಪತಿಗೆ ಆ ಮಾತು ಮನಸ್ಸಿಗೆ ಬಂದಂತೆ ತೋರಲಿಲ್ಲ. ಅವನು ಗಂಭೀರಮುದ್ರೆಯಿಂದ:—ವೀರಪುಂಗವ! ನನ್ನ ಈ ಕೃಷ್ಣಮುಖವನ್ನು ಆ ಭೂಪತಿಗೆ ಹೇಗೆ ತೋರಿಸಲಿ? ಬಣಜಂಭದಿಂದ ಪ್ರತಿಜ್ಞೆಮಾಡಿ, ಅದರಂತೆ

ಕಾರ್ಯವಮಾಡದಿದ್ದ ನನ್ನಂಥ ಅಧಮನು ಭೂಮಿಗೆ ಭಾರವಾಗಿದ್ದು ಫಲವೇನು? ಆ ಯವನರು ನಮ್ಮ ರಾಜಪುತ್ರಿಯನ್ನೊಯ್ದಿರಲು, ಅವಳನ್ನು ತರುವದು ನನ್ನಂಥ ಸೇನಾಪತಿಯಿಂದ ಆಗಲಿಲ್ಲ. ಧಿಕ್ಕಾರವು! ನನ್ನ ಜನ್ಮಕ್ಕೆ ಧಿಕ್ಕಾರವು!!

ಕುಳಿತ ವೀರರಿಗೆ ಈ ಮಾತುಗಳನ್ನು ಕೇಳಿ ಬಹಳ ಖೇದವೆನಿಸಿತು. ಆದರೂ ಅವರಲ್ಲಿ ಓರ್ವನು ಧೈರ್ಯದಿಂದ ಸೇನಾಪತಿಯನ್ನು ಕುರಿತು:—"ಸರದಾರ, ಹೀಗೇಕೆ ಚಿಂತೆ ಮಾಡುವಿರಿ? ಚಿಂತೆಮಾಡಿ ಉಪಯೋಗವಿಲ್ಲ; ಏಳಿರಿ ನಿಮ್ಮ ಕರ್ತವ್ಯವನ್ನು ನೀವು ಚನ್ನಾಗಿ ಮಾಡಿರುವಿರಿ; ಇದರಲ್ಲಿ ನಿಮ್ಮ ತಪ್ಪೇನೂ ಇಲ್ಲ; ಗುಪ್ತವೇಷತಾಳಿ ಕಂದಹಾರಕ್ಕೆ ಹೋಗಿಬಂದಿರಿ; ಅಲ್ಲಿಯೂ ಅವಳ ಸುದ್ದಿಯು ಹತ್ತಲಿಲ್ಲ; ಅಂದಮೇಲೆ ನಾವು ತಿರುಗಿ ನಮ್ಮ ಊರಿಗೆ ಹೋಗುವದು ಉತ್ತಮವು. ನಾವು ತಿರುಗಿ ಹೋದರೆ ನಮ್ಮ ದೊರೆಯು ನಮಗೆ ಶಿಕ್ಷೆಯನ್ನು ವಿಧಿಸಲಾರನು" ಎಂದನು.

ಸೇನಾಪತಿಯು ಪುನಃ ಇಂತು ನುಡಿದನು—"ವೀರಶಿರೋಮಣೀ, ನನ್ನ ಮಗಳನ್ನೇ ಪರರು ಕದ್ದುಕೊಂಡು ಹೋಗಿದ್ದರೆ ನನಗೆ ಹೇಗೆ ಅನಿಸುತ್ತಿತ್ತು? ಮತ್ತು ನನ್ನೆದುರಿಗೆ ಓರ್ವವೀರನು ನನ್ನ ಮಗಳನ್ನು ತರಲಿಕ್ಕೆ ಪ್ರತಿಜ್ಞೆ ಮಾಡಿ, ತರದೆ ಹಾಗೇ ಬಂದು ನನಗೆ ಮುಖತೋರಿಸಿದ್ದರೆ ನನಗೆ ಆ ಮನುಷ್ಯನ ವಿಷಯಕವಾಗಿ ಎಷ್ಟು ತಿರಸ್ಕಾರಭಾವವು ಉತ್ಪನ್ನವಾಗುತ್ತಿತ್ತು? ಇದನ್ನು ಮನದಲ್ಲಿ ತಂದುಕೊ. ಆ ರಾಜಪುತ್ರಿಯು ಅರಸನ ಮಗಳೆಂದು ತಿಳಿಯದೆ ನಿಮ್ಮ ಮಗಳೆಂದು ತಿಳಿಯಿರಿ. ಅಂದರೆ ಅದರ ಕಲ್ಪನೆಯು ನಿಮಗೆ ಬರುವದು. ಹೆಚ್ಚಿಗೆಯೇನು ಹೇಳಲಿ? ಅದೂ ಇರಲಿ. ಪ್ರತಿಜ್ಞೆಯಂತೆ ನಾನು ಕೆಲಸಮಾಡಲಿಲ್ಲ. ಆದ್ದರಿಂದ ನನಗೆ ಬಹಳ ಖೇದವಾಗಿದೆ."

"ಹಾಗಾದರೆ ಮುಂದೆ ಏನು ಮಾಡಬೇಕೆಂದಿರುವಿರಿ?" ಎಂದು ಓರ್ವ ವೀರನು ನುಡಿದನು.

"ಈ ಸೇನಾಪತಿಯ ಕೆಲಸವನ್ನು ನಿಮ್ಮಲ್ಲಿಯ ಓರ್ವನಿಗೆ ಒಪ್ಪಿಸಿ, ನಾನು ವೀರರಿಗುಚಿತವಾದ ಕೆಲಸವನ್ನು ಮಾಡುವೆನು." ಎಂದು ಸೇನಾಧಿಪನು ನುಡಿದನು.

"ವೀರರಿಗುಚಿತವಾದ ಕೆಲಸವು ಅದಾವುದು?"

"ವೀರಸ್ವರ್ಗವನ್ನು ಹೊಂದುವದು!"

ಇದನ್ನು ಕೇಳಿದ ಕೂಡಲೇ ಎಲ್ಲರ ಎದೆಯು ಧಸ್ಸೆಂದಿತು. ಅವರ ಕಣ್ಣೊಳಗಿಂದ ಒಂದೆರಡು ಅಶ್ರುಗಳು ಉದಿರಿರಬಹುದು! ಆಗ ಅವರಲ್ಲಿ ಓರ್ವನು ಅಶ್ರುಪೂರ್ಣನೇತ್ರಗಳಿಂದ—ಸರದಾರ, ನಿಮ್ಮಂಥ ವೀರ-ಮಣಿಯನ್ನು ಕಳಕೊಳ್ಳುವ ಭೂಮಾತೆಯು ನಿಜವಾಗಿಯೂ ದುರ್ದೈವಿಯು! ಆದ್ದರಿಂದ ಆ ವಿಚಾರವನ್ನು ಬಿಟ್ಟುಬಿಡಿರಿ. ಜೀವದಿಂದಿದ್ದರೆ ಮತ್ತೆ ಬೇಕಾದ ಕಾರ್ಯಗಳನ್ನು ಮಾಡಿ ಅರಸನ ಒಲವನ್ನು ಸಂಪಾದಿಸಬಹುದು. ಅವನ ಮನವನ್ನು ತೃಪ್ತಿಗೊಳಿಸಬಹುದು. ಆದರೆ ವ್ಯರ್ಥವಾಗಿ ಪ್ರಾಣಕ್ಕೆರವಾದರೆ ಉಪಯೋಗವೇನು? ವಿಚಾರಮಾಡಿರಿ. ನೀವೂ ತಿಳಿದವರಿರುವಿರಿ. ಹೆಚ್ಚಿಗೆ ನಾನೇನೂ ಹೇಳಬೇಕೆಂಬ ಹಾಗಿಲ್ಲ.'' ಎಂದನು.

ವೀರನೇ, ಪ್ರತಿಜ್ಞಾಭಂಗವನ್ನು ನಾನೆಂದೂ ಮಾಡಲಾರೆನು. ಹಿಂದೂವೀರರಿಗುಚಿತವಾದ ಅಗ್ನಿಕಾಷ್ಠ ಭಕ್ಷಣ ಮಾಡುವದೇ ನನಗೆ ಉಚಿತವು. ನೀವಿನ್ನು ಹೋಗಿರಿ ನಾಳೆ ಮುಂಜಾವಿಗೆ ಸರಿಯಾಗಿ ಅಗ್ನಿಯನ್ನು ಸಿದ್ಧಪಡಿಸಿರಿ. ಆಗ ನಾನು ಎಲ್ಲರಿಗೆ ಹೇಳತಕ್ಕದ್ದನ್ನೆಲ್ಲ ಹೇಳಿ, ಅಗ್ನಿಪ್ರವೇಶ ಮಾಡುವೆನು.''

ಆಮೇಲೆ ಓರ್ವ ವೀರಶ್ರೇಷ್ಠನಿಗೆ ಸೇನಾಪತಿಯು ಕೆಲಸವನ್ನೊಪ್ಪಿಸಿದನು. ಆ ಸೇನಾಪತಿಯು ದುಃಖದಿಂದ ಆ ಅಧಿಕಾರವನ್ನು ಸ್ವೀಕರಿಸಿದನು. ಮತ್ತು ಸ್ವೀಕರಿಸುವ ಮುಂದೆ ಈಪ್ರಕಾರ ನುಡಿದನು:—''ಮಹಾಪ್ರಭೋ, ನಿನ್ನ ಪರಾಕ್ರಮ-ಶೌರ್ಯ-ಧೈರ್ಯ-ಸಾಹಸಗಳು ನನ್ನಲ್ಲಿ ಎಂದಿಗೂ ಬರಲಾರವು. ನನ್ನಲ್ಲಿಯ ಯಾವ ಗುಣವನ್ನು ನೋಡಿ ನೀವು ನನಗೆ ಈ ಅಧಿಕಾರಕೊಟ್ಟಿರೆಂಬದೇ ತಿಳಿಯದಾಗಿದೆ. ಆದರೂ ಸರದಾರ! ನಾನು ನನ್ನ ಕರ್ತವ್ಯವನ್ನು ಸ್ಮರಿಸಿ, ಕೆಲಸಮಾಡುತ್ತ ಹೋಗುತ್ತೇನೆ'' ಎಂದು ನುಡಿದನು.

ಮರುದಿನ ಪಾಳಯದಲ್ಲಿ ವಿಲಕ್ಷಣವಾದ ಗೊಂದಲವೆದ್ದಿತು. ಒಬ್ಬರ ಮನಕ್ಕೂ ಸಮಾಧಾನವಿಲ್ಲ ಸ್ವಾಮಿಭಕ್ತನಾದ ಆ ಸೇನಾಪತಿಯಲ್ಲಿ ಎಲ್ಲ ಸೈನಿಕರ ಪ್ರೇಮವಿದ್ದಿತು. ಸೇನಾಪತಿಯಾದರೂ ಎಲ್ಲರನ್ನು ಒಳ್ಳೇ ಪ್ರೇಮದಿಂದ ನಡಿಸಿಕೊಳ್ಳುತ್ತಿದ್ದನು. ದೊಡ್ಡ ಅಧಿಕಾರವಿದೆಯೆಂದು ಆ ಅಧಿಕಾರದ ದುರುಪಯೋಗವನ್ನು ಎಂದೂ ಮಾಡುತ್ತಿದ್ದಿಲ್ಲ. ಸ್ವಲ್ಪ ತಪ್ಪಿನ ಸಲುವಾಗಿ ದೊಡ್ಡ ಶಿಕ್ಷೆಯನ್ನು ಅವನೆಂದೂ ಮಾಡಲಿಲ್ಲ. ಪಕ್ಷಪಾತವಂತೂ ಇಲ್ಲವೇ ಇಲ್ಲ. ಇಂಥ ಪ್ರೇಮಹೃದಯದ ಅಧಿಕಾರಿಯನ್ನು ಯಾರು ಪ್ರೀತಿಸಲಿಕ್ಕಿಲ್ಲ?

ಇಂಥವನ ಯೋಗಕ್ಷೇಮವನ್ನು ತಕ್ಕೊಂಡರೆ ಇಲ್ಲವೆ ಇಂಥವನ ಸಂಗಡ ಮಾತನಾಡಿದರೆ ತನ್ನ ಮರ್ಯಾದೆಯು ಹೋಗುತ್ತದೆಂದು ಅವನು ಎಂದೂ ಭಾವಿಸಲಿಲ್ಲ. ಇದ್ದರೆ ಇಂಥ ಅಧಿಕಾರಿಯಿರಬೇಕು! ಅಧಿಕಾರವಿದ್ದವರು ನಿಗರ್ವಿಗಳಾಗುವದು ಅಪರೂಪ; ಆದರೆ ಈ ಸೇನಾಪತಿಯು ಅಂಥ ಜನರಿಗೆ ಅಪವಾದ ಸ್ವರೂಪನಾಗಿದ್ದನು. ಕೆಲವರು ಸ್ವಲ್ಪ ಅಧಿಕಾರ ಸಿಕ್ಕಮಾತ್ರಕ್ಕೆ ಸೆಟೆಸೆಟೆದು ಬೀಳುವರು. ಅಂಥವರ ಕೈಯಲ್ಲಿಯ ಅಧಿಕಾರವು ಹ್ಯಾಗೆ ಜನಪ್ರಿಯವಾದೀತು? ಇರಲಿ.

ಸೇನಾಪತಿಯು ತನ್ನ ಪ್ರೀತಿಯ ಜನರಿಗೆ ದರುಶನಕೊಟ್ಟನು. ಅವರು ಕಂಬನಿಗಳಿಂದ ತಮ್ಮ ದುಃಖಪ್ರದರ್ಶನವನ್ನು ಮಾಡಿದರು. ಆಗ ಅವನು ಅವರಿಗೆ—"ಎಲ! ಇದೇನು? ಇಂಥ ಆನಂದಸಮಯದಲ್ಲಿ ಹೀಗೆ ಅಳಬೇಕೆ? ನಾನು ಪ್ರತಿಜ್ಞೆಯಂತೆ ವೀರಸ್ವರ್ಗಕ್ಕೆ ಹೋಗುವದು ಅನ್ಯಾಯವಾಗಬಹುದೆ? ಎಂದು ನುಡಿಯುತ್ತ ಅವರನ್ನು ಸಮಾಧಾನಗೊಳಿಸಿದನು.

ಆ ಮೇಲೆ ಅವನು ಗಜಶಾಲೆಗೆ ಬಂದನು. ಅಲ್ಲಿ ಆನೆಗಳೆಲ್ಲ ಇವನು ಬಂದಕೂಡಲೇ ತಮ್ಮ ಸೊಂಡಿಲುಗಳನ್ನೆತ್ತಿ ಇವನಿಗೆ ನಮಸ್ಕಾರ ಮಾಡಿದವು. ಅವನು ಅವುಗಳನ್ನು ಪ್ರೇಮದಿಂದ ನೋಡುವಾಗ ಅವುಗಳ ದೃಷ್ಟಿಯು ಇವನ ಕಡೆಗೇ ಇತ್ತು. ಅವುಗಳಿಗೂ ಕೂಡ ತಮ್ಮ ಸೇನಾಪತಿಯ ಅಗ್ನಿಪ್ರವೇಶದ ಸಂಗತಿಯು ತಿಳಿದಿರುವದೋ ಎಂಬಂತೆ ಅವು ತಮ್ಮೆದುರಿಗೆ ಬಿದ್ದಿರುವ ಮೇವನ್ನು ಸಹ ತಿನ್ನದೆ, ಎವೆಯಿಕ್ಕದೆ ಅವನನ್ನು ನೋಡುತ್ತಿದ್ದವು. ಗಜಶಾಲೆಯಿಂದ ನೆಟ್ಟಗೆ ಕುದುರೆಯ ಲಾಯಕ್ಕೆ ಹೋದನು. ಆಗ ಕುದುರೆಗಳು ಖೇಕರಿಸಿ, ಇವನನ್ನು ಆದರದಿಂದ ಸ್ವಾಗತಮಾಡುವಂತೆ ತೋರಿದವು. ಆಗ ಅವನು ತನ್ನ ಪ್ರೇಮದ ಕುದುರೆಗಳ ಮೈಮೇಲೆ ಕೈಯಾಡಿಸಿ, ಅವುಗಳನ್ನು ಬಿಟ್ಟು ಚಿತೆಯ ಕಡೆಗೆ ನಡೆದನು.

ಅಷ್ಟರಲ್ಲಿ ಚಿತೆಯು ಹೊತ್ತಿ ಉರಿಯುತ್ತಿತ್ತು. ಧಗಧಗಿಸುವ ಆ ಅಗ್ನಿಯ ಜ್ವಾಲೆಗಳು ಸದ್ಗುಣಿಯಾದ ಸೇನಾಪತಿಯು ತಮ್ಮೆಡೆಗೆ ಬರುವದನ್ನು ಆಕಾಶದಲ್ಲಿಯ ದೇವತೆಗಳಿಗೆ ತಿಳಿಸುವವೋ ಎಂಬಂತೆ ತೋರುತ್ತಿದ್ದವು. ಸೇವಕರು ಕೊರಡುಗಳನ್ನು ಹಾಕಿ, ಅಗ್ನಿಯನ್ನು ಮತ್ತಿಷ್ಟು ಹೊತ್ತಿಸಹತ್ತಿದರು. ಅಗ್ನಿಯ ಹೊಗೆಯು ಗಗನಮಂಡಲವನ್ನೆಲ್ಲ ವ್ಯಾಪಿಸಿತು. ಸೈನಿಕರೆಲ್ಲರೂ ವಿಲಕ್ಷಣಸಂಕ

ಟಿಕೊಳ್ಳಗಾಗಿ ನಿಂತುಕೊಂಡಿದ್ದರು. ಅಷ್ಟರಲ್ಲಿ ಸೇನಾಪತಿಯು ತನ್ನ ಅನುಚರರೊಡನೆ ಅಲ್ಲಿಗೆ ಬಂದನು. ಆಗ ಎಲ್ಲ ಜನರೂ ಸೇನಾಪತಿಯನ್ನೇ ನೋಡಲಾರಂಭಿಸಿದರು.

ಸೇನಾಪತಿಯು ವಿಧಿಪೂರ್ವಕವಾಗಿ ಅಗ್ನಿಪೂಜೆಯನ್ನು ಮಾಡಿದನು. ಪೂಜೆಯಾದ ಮೇಲೆ ಅವನು ಅಗ್ನಿಯನ್ನು ಕುರಿತು—"ಎಲೈ ಹುತಾಶನನೇ, ಇಂದು ನನ್ನ ಈ ಪಾಪಿದೇಹವನ್ನು ಸುಟ್ಟು ಭಸ್ಮೀಭೂತವನ್ನಾಗಮಾಡು. ಪ್ರತಿಜ್ಞೆಯಂತೆ ಕಾರ್ಯಮಾಡದ ನನಗೆ ನೀನು ಸ್ಥಳಕೊಡಬೇಕೆಂದು ಪ್ರಾರ್ಥಿಸುತ್ತೇನೆ." ಎಂದನು. ಆ ಮೇಲೆ ತನ್ನನ್ನು ನಿರೀಕ್ಷಿಸುತ್ತಿದ್ದ ಎಲ್ಲ ಜನರ ಕಡೆಗೆ ತಿರುಗಿ—"ನನ್ನ ಪ್ರಿಯಬಂಧುಗಳೇ, ಸ್ವಾಮಿಕಾರ್ಯಕ್ಕಾಗಿ ದೇಹವನ್ನರ್ಪಿಸುವ ಯೋಗವು ಬಂದದ್ದಕ್ಕಾಗಿ ನನಗೆ ಬಹಳ ಆನಂದವಾಗುತ್ತದೆ. ನನ್ನ ವಿಯೋಗಕ್ಕಾಗಿ ಯಾರೂ ದುಃಖಪಡಬೇಡಿರಿ. ನನ್ನಂಥ ಸಾವಿರಾರು ಜನರು ನಿಮ್ಮಲ್ಲಿರುವರು. ಸ್ವಾಮಿಸೇವೆಯನ್ನು ಮನಸುಗೊಟ್ಟು ಮಾಡಿರಿ. ಅದರಲ್ಲಿಯೇ ನಿಮ್ಮ ಶ್ರೇಯಸ್ಸು ಇರುವದು. ಹಿಡಿದ ಕೆಲಸವನ್ನು ಬಿಡಬೇಡಿರಿ. ಒಮ್ಮೆ ಪ್ರತಿಜ್ಞೆಮಾಡಿದ ಮೇಲೆ ಪ್ರಾಣಹೋಗುವವರೆಗೂ ಅದನ್ನೇ ಮಾಡಿರಿ. ಅದರಲ್ಲಿ ನಿಮ್ಮ ಅಂತರಾತ್ಮವು ಹೊರಟು ಹೋದರೆ ದುಃಖಪಡಬೇಡಿರಿ.

ಹೆಚ್ಚಿನ ಅಧಿಕಾರವನ್ನು ಹೊಂದಿದ ನನ್ನ ಬಂಧುಗಳೇ, ನೀವು ಸ್ವಲ್ಪಾದರೂ ಗರ್ವವನ್ನು ತಂದುಕೊಳ್ಳಬೇಡಿರಿ. ಗರ್ವವು ಬಹು ಭಯಾನಕವಾದದ್ದು. ನೀವು ಗರ್ವದಿಂದ ಜನರಿಗೆ ಉಪದ್ರವಕೊಟ್ಟರೆ, ಮುಂದೆ ನಿಮಗೆ ಬಹಳ ತೊಂದರೆಯಾಗುವದು. ಒಂದುವೇಳೆ ಅಧಿಕಾರವಿರುವವರೆಗೆ ಮಾತ್ರ ನೀವು ಪ್ರಜೆಗಳನ್ನು ಪೀಡಿಸಬಹುದು. ನಿಮ್ಮ ಮುಪ್ಪಿನ ಕಾಲದಲ್ಲಿ-ನಿಮ್ಮ ಅಧಿಕಾರವು ಹೋದ ಮೇಲೆ ನಿಮ್ಮನ್ನು ಯಾರೂ ಮಾತಾಡಿಸಲಾರರು. ಮೊದಲು ನೀವು ಜನರಿಗೆ ಕೇಡು ಮಾಡಿದ್ದರೆ ಆಗ ಜನರು ನಿಮ್ಮ ಸೇಡನ್ನು ತೀರಿಸಿಕೊಳ್ಳದೆ ಬಿಡರು.

ಇನ್ನು ಹೆಚ್ಚಿಗೆ ಹೇಳುವದೇನದೆ? ನೀವು ಎಲ್ಲರೂ ತಿಳಿದವರಿರುವಿರಿ. ಹಿಂದುಸ್ಥಾನದ ವಿಷಯವಾಗಿ ನಿಮ್ಮಲ್ಲಿ ಸ್ವಾಭಿಮಾನವಿರಲಿ. ನಿಮ್ಮ ದೇಶವು ನಿಮ್ಮ ಹಡೆದ ತಾಯಿಗಿಂತಲೂ ಶ್ರೇಷ್ಠವಾದದ್ದು. ಅದರ ಮೇಲೆ ನಿಮ್ಮ ತಾಯಿಗಿಂತಲೂ ಹೆಚ್ಚು ಪ್ರೇಮವನ್ನಿಡಿರಿ; ಮಿಥಿಲಾರಾಜ್ಯವನ್ನು ಸಂರಕ್ಷಿಸಿರಿ; ರಾಜನಿಷ್ಠರಾಗಿರಿ.

ಬಾಂಧವರೇ, ಹೊತ್ತಾಯಿತು. ಸೂರ್ಯನು ಗಗನಮಂಡಲವನ್ನು ಒತ್ತರದಿಂದ ಕ್ರಮಿಸುತ್ತಿದ್ದಾನೆ. ನಾನಿನ್ನು ಅಗ್ನಿಪ್ರವೇಶ ಮಾಡುತ್ತೇನೆ. ನಾನು ಹೇಳಿದ ಮಾತುಗಳು ನಿಮ್ಮ ಹೃದಯದಲ್ಲಿ ಸ್ಥಿರವಾಗಿ ಮೂಡಲಿ! ಎಲ್ಲರಿಗೂ ನನ್ನ ನಮಸ್ಕಾರಗಳು. ಎಂದು ನುಡಿಯುವಾಗ ಅವನ ಕಂಠವು ದುಃಖದಿಂದ ಒತ್ತರಿಸಿ ಮುಂದಿನ ಮಾತುಗಳು ಹೊರಡದಾದವು. ಆಗ ಅವನು ಶುಭ್ರವಾದ ದೋತರವನ್ನುಟ್ಟು, ಬಿಳಿಯ ದೋತರವನ್ನು ಹೊತ್ತಿದ್ದನು. ಎಲ್ಲ ಸಿದ್ಧತೆಯೂ ಆಯಿತು. ಇನ್ನು ಅವನು ಅಗ್ನಿಪ್ರವೇಶ ಮಾಡತಕ್ಕವನು, ಅಷ್ಟರಲ್ಲಿ "ಸೇನಾಪತಿಯೇ, ನಿಲ್ಲು! ನಿಲ್ಲು! ಒಮ್ಮೆಲೇ ಧುಡುಂಪ್ರವೇಶ ಮಾಡಬೇಡ!" ಎಂಬ ಶಬ್ದಗಳು ಕೇಳಬಂದವು.

ಪ್ರಿಯವಾಚಕರೇ ಈ ಶಬ್ದಗಳು ಯಾರವಾಗಿರಬಹುದು?

---

## ೧೭ನೆಯ ಪ್ರಕರಣ—ಹಾ! ತಿಳಿಯಿತು.

ಪ್ರಿಯವಾಚಕರೇ, ಸೇನಾಪತಿಯನ್ನು ಬಿಟ್ಟು ನಾವು ಮಿಥಿಲಾನಗರಿಗೆ ಹೋಗೋಣ ನಡೆಯಿರಿ. ಇಂದು ಮಿಥಿಲಾನಗರಿಯಲ್ಲಿ ಎಲ್ಲ ಕಡೆಗೂ ಆನಂದವೇ ಆನಂದವು. ನಗರಿಯಲ್ಲಿ ಗುಡಿತೋರಣಗಳು ಮೆರೆಯಲಾರಂಭಿಸಿವೆ. ರಾಜನಂದಿನಿಯ ಅಪಹರಣದಿಂದ ಸ್ಮಶಾನದಂತೆ ತೋರುತ್ತಿದ್ದ ಆ ನಗರವು ಇಂದು ಮಂಗಲಕರವಾಗಿ ತೋರಹತ್ತಿದೆ. ಅತ್ತ ನೋಡಿರಿ ರಾಜಮಂದಿರದಲ್ಲಿ ನಡೆದ ಸಂಭ್ರಮವನ್ನು! ಸಿಂಹಕೇತು ರಾಜನು ವಿಲಕ್ಷಣ ಸಂಭ್ರಮವನ್ನು ತಳೆದಿರುತ್ತಾನೆ. ಬಡಬಗ್ಗರಿಗೆ ದಾನ-ಧರ್ಮಗಳನ್ನು ಮಾಡಲು ಅಪ್ಪಣೆ ಮಾಡುತ್ತಿರುವನು. ಪಟ್ಟಣವನ್ನೆಲ್ಲ ಇನ್ನೂ ಅಧಿಕವಾಗಿ ಸಿಂಗರಿಸುವಂತೆ ಆಜ್ಞಾಪಿಸುತ್ತಿರುವನು ಎಲ್ಲ ಕಡೆಗೂ ವಿಲಕ್ಷಣ ಚಟವಟಿಕೆಯು ತೋರುತ್ತಿರುವದು. ಇದರ ಗೂಢವೇನಿರಬಹುದು?

ಗೂಢವೇನಿರಬೇಕು? ಯಾವ ಸಂಗತಿಯಸಲುವಾಗಿ—ಯಾವ ರಾಜನಂದಿನಿಯ ವಿಯೋಗದ ಸಲುವಾಗಿ ರಾಜಮಂದಿರದಲ್ಲಿ ಭಯಂಕರ ಚಿಂತಾಗ್ನಿಯುತ್ಪನ್ನವಾಗಿತ್ತೋ ಆ ರಾಜನಂದಿನಿಯು ಇಂಥಲ್ಲಿ ಸುರಕ್ಷಿತಳಾಗಿರುವಳೆಂಬ

ಸುದ್ದಿಯು ತಿಳಿದಬಳಿಕ ಚಿಂತಾಗ್ನಿಯು ಶಮನವಾಗಲಿಕ್ಕೆ ತಡವೇ? ಪ್ರಿಯಪಾಠ ಕರೇ, ಅಜಯಸಿಂಹನನ್ನು ನೀವು ಮರೆತಿಲ್ಲವಷ್ಟೇ; ಆತನು ಮೋಹನಪುರಿಯ ರಾಜ ಪ್ರಾಸಾದದಲ್ಲಿ ರಾಜನಂದಿನಿಯನ್ನೂ, ರತ್ನಾಕರ ರಾಜಪುತ್ರನನ್ನೂ, ಸೌರಾಷ್ಟ್ರ ರಾಜಕುವರಿಯನ್ನೂ ಇರಿಸಿ ಮಿಥಿಲೆಗೆ ಧಾವಿಸಿಬಂದನು. ಈ ಮಹತ್ವದ ಆನಂ-ದದ ಸುದ್ದಿಯನ್ನು ತಿಳಿಸುವದಕ್ಕೋಸ್ಕರ ಆ ದೂತನು ವಾಯುವೇಗವನ್ನು ತಳೆ ದಿದ್ದನೆಂದರೂ ಸಲ್ಲುವದು. ಅವನು ಬಂದಾಗ ಸಿಂಹಕೇತುರಾಜನು ಶೋಕ ಪೂರಿತ ನೇತ್ರಗಳನ್ನು ಒರೆಸುತ್ತ ಶೂನ್ಯದೃಷ್ಟಿಯಿಂದ ದಿವಾಣಖಾನೆಯಲ್ಲಿ ಕುಳಿತು ಕೊಂಡಿದ್ದನು. ಅಜಯಸಿಂಹನು ತಡೆಯಿಲ್ಲದೇ ಒಳಗೆ ಪ್ರವೇಶ ಮಾಡಿ ರಾಜನು ಎಲ್ಲಿರುವನೆಂಬದನ್ನು ತಿಳಿದುಕೊಂಡು ಸಮಯಾಸಮಯವನ್ನು ಕೂಡಾ ಲೆಕ್ಕಿ ಸದೆ ಕಾವಲುಗಾರರನ್ನು ದಬ್ಬಿ ರಾಜನೆದುರಿಗೆ ಹೋಗಿ ನೆಲಮುಟ್ಟಿ ಮುಜುರೆ ಮಾಡಿ ನಿಂತುಕೊಂಡನು. ಆಗ ಅವನ ಮುಖದಲ್ಲಿ ಸಂತೋಷದ ಕಳೆಯು ಮಿನುಗುತ್ತಿದ್ದದರಿಂದ ಇಂಗಿತಜ್ಞನಾದ ರಾಜನು ನೆಟ್ಟಗೆ ಕುಳಿತು—ಅಜಯ ಸಿಂಹ! ಎಲ್ಲಿಂದ ಬಂದೆ? ನಮ್ಮ ಸೈನ್ಯವು ಕಂದಹಾರದಿಂದ ತಿರುಗಿ ಬಂದಿತೇನು? ಹೋದಕಾರ್ಯವೇನಾಯಿತು? ಎಂದು ನುಡಿದನು.

ಅಜಯಸಿಂಹನು ಮತ್ತೊಮ್ಮೆ ಮುಜುರೆ ಮಾಡಿ—ಮಹಾರಾಜ, ರಾಜ ನಂದಿನಿಯವರು ಕಂದಹಾರವನ್ನು ಕಂಡಿರುವದಿಲ್ಲ. ನಮ್ಮ ರಾಜ್ಯದಲ್ಲಿಯೇ ಒಂದು ಅರಣ್ಯದಲ್ಲಿ ಅವಂತೀರಾಜಪುತ್ರನಿಂದ ಸಂರಕ್ಷಿತರಾಗಿರುವರು. ಈಗ ಅವರನ್ನು ನಮ್ಮ ಮೋಹನಪುರರಾಜಪ್ರಾಸಾದದಲ್ಲಿರಿಸಿ ಸನ್ನಿಧಿಗೆ ಸುದ್ದಿಯನ್ನ ರುಹಲು ಬಂದಿದ್ದೇನೆ. ರಾಜನಂದಿನಿಯು ಅರಣ್ಯದಲ್ಲಿ ಅವಂತೀರಾಜಪುತ್ರ ನಿಗೆ ದೊರೆತ ಸಂಗತಿಯನ್ನೂ ಮುಂದೆ ಆಕೆಯು ಪಟ್ಟ ಕಷ್ಟವನ್ನೂ ತಾವು ಸಾವಕಾಶ ಶ್ರವಣ ಮಾಡಬಹುದು. ಪ್ರಸ್ತುತದ ಆನಂದದ ಸಂಗತಿಯಲ್ಲಿ ಅದರ ಶ್ರವಣ ಬೇಡ. ಮುಖ್ಯವಾಗಿ ರಾಜನಂದಿನಿಯು ತನ್ನ ಶೀಲವನ್ನು ಕಾಯ್ದು ಕೊಂಡು ಸನ್ನಿಧಾನದ ದರ್ಶನಾಪೇಕ್ಷಿಗಳಾಗಿದ್ದಾಳೆ........ಎಂದು ನುಡಿಯುತ್ತಿ ರಲು ರಾಜನು ನಡುವೇ ಬಾಯಿಹಾಕಿ—ಏನು ಅಜಯಸಿಂಹ, ರಾಜನಂದಿನಿಯು ಬದುಕಿರುವಳೇ? ನಮ್ಮ ರಾಜ್ಯದಲ್ಲಿಯ ಅರಣ್ಯದಲ್ಲಿರುವಳೇ? ಅವಂತಿರಾಜ ಪುತ್ರನು ಆಕೆಯನ್ನು ಸಂರಕ್ಷಿಸಿದನೇ? ಬಹಳ ಸಂತೋಷವಾಯಿತು. ಇಂಥ ಸಂತೋಷದ ಸುದ್ದಿಯನ್ನು ತಂದ ನಿನಗೆ ನಮ್ಮ ಮೋಹನಪುರಿಯನ್ನೇ ಇನಾ

ವಾಗಿ ಕೊಟ್ಟಿರುತ್ತೇನೆ (ಚಟ್ಟನೆ ಎದ್ದು ನಿಂತು) ನಡೆ; ಈ ಅಮೃತಸದೃಶವಾದ ಸುದ್ದಿಯನ್ನು ನಮ್ಮ ಪರಿವಾರಕ್ಕೆಲ್ಲ ತಿಳಿಸು. ಕರ್ಮಚಾರಿಗೆ ನಗರಿಯಲ್ಲಿ ಡಂಗುರ ಹೊಯಿಸುವಂತೆ ಹೇಳು. ರಾಜನಂದಿನಿಯ ಶುಭಚಿಂತನೆಗಾಗಿ ನಗರಿಯಲ್ಲಿ ದೇವತಾರಾಧನೆಗಳು ನಡೆಯುವಂತೆ ಕೋಶಾಧ್ಯಕ್ಷನಿಗೆ ತಿಳಿಸು ಎಂದು ಆಜ್ಞಾಪಿಸಿ ಆತನಿಗೆ ಅಪ್ಪಣೆಕೊಟ್ಟು ರಾಣೀವಾಸಕ್ಕೆ ನಡೆದನು.

ಪ್ರಿಯವಾಚಕರೇ, ಅಪತ್ಯ ಸ್ನೇಹವೆಂಬದು ಜಗತ್ತಿನಲ್ಲಿ ಎಲ್ಲಕ್ಕೂ ಶ್ರೇಷ್ಠವಾದದ್ದು. ಮಕ್ಕಳಿಲ್ಲದವರಿಗೆ ಈ ಪವಿತ್ರ ಸ್ನೇಹವು ಗೊತ್ತಾಗಲಾರದು. ಇಂಥ ಪರಾಕಾಷ್ಠವಾದ ಅಪತ್ಯ ಸ್ನೇಹದಿಂದ ಬದ್ಧಿತನಾದ ರಾಜನಿಗೆ ಈಗ ಹ್ಯಾಗೆ ಆಗಿರಬೇಡ! ಶತ್ರುಗಳ ಕೈಯಲ್ಲಿ ಸಿಕ್ಕ ಮಗಳು ಸುರಕ್ಷಿತವಾಗಿ ಶೀಲವತಿಯಾಗಿ ಹಿಂದೂ ರಾಜಪುತ್ರನಿಂದ ರಕ್ಷಿತಳಾಗಿರುವಳೆಂಬ ಸುದ್ದಿಯ ಶ್ರವಣದಿಂದ ಅವನಿಗೆ ಎಷ್ಟು ಆನಂದವಾಗಿರಲಿಕ್ಕಿಲ್ಲ? ಇರಲಿ. ರಾಜನು ರಾಜನಂದಿನಿಯನ್ನು ಕರೆತರುವದಕ್ಕಾಗಿ ತಾನೇ ಸಕಲ ವೈಭವದೊಡನೆ ಮೋಹನ ಪುರಿಗೆ ಹೊರಟನು. ರಾಜಾಜ್ಞೆಯಂತೆ ಓರ್ವ ಹೇಜೀಬನು ಕಂದಹಾರದ ಕಡೆಗೆ ಸಾಗಿರುವ ಮಿಥಿಲಾ ಸೈನ್ಯವನ್ನು ಕರೆತರುವದಕ್ಕಾಗಿ ಹೊರಟನು.

ಹೀಗೆ ಹೊರಟ ಹೇಜೀಬನೇ ಶೀಘ್ರವಾಗಿ ಮಾರ್ಗವನ್ನು ಕ್ರಮಿಸಿ ಸೇನಾಪತಿಯು ಅಗ್ನಿಕಾಷ್ಠ ಭಕ್ಷಣ ಮಾಡುತ್ತಿರುವ ಸಮಯದಲ್ಲಿ ಅಲ್ಲಿಗೆ ಬಂದು, ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ ಕೂಗಿ ಸೇನಾಪತಿಯ ಕಾರ್ಯಕ್ಕೆ ತಡೆಯನ್ನುಂಟುಮಾಡಿದನು. ಪ್ರಿಯವಾಚಕರೇ ಆ ಶಬ್ದಗಳು ಯಾರವೆಂಬದು ತಿಳಿಯಿತಲ್ಲವೇ?

---

# ೧೮ನೆಯ ಪ್ರಕರಣ.

## ಉಪಸಂಹಾರ.



ಪ್ರಿಯವಾಚಕರೇ, ಆ ಆನಂದವನ್ನೇನು ಹೇಳೋಣ! ಮಿಥಿಲಾ ಸೈನಿಕರ ಮೇಲೂ, ಸೇನಾಪತಿಯ ಮೇಲೂ ಅಮೃತಮಳೆ ಕರೆದಂತಾಯಿತು. ಸೇನಾಪತಿಯು ಹೇಜೀಬನ ಮುಖದಿಂದ ಎಲ್ಲ ವೃತ್ತಾಂತವನ್ನು ಕೇಳಿ ಅತ್ಯಂತ

ಸಂತೋಷಿತನಾಗಿ ಆ ಕೂಡಲೆ ಅಲ್ಲಿಂದ ಸಸೈನ್ಯವಾಗಿ ತಿರುಗಿದನು. ಸೈನ್ಯವು ಶೀಘ್ರಗತಿಯಿಂದ ಸಾಗಿ ಮೋಹನಪುರಿಗೆ ಬಂದಿತು. ಅಲ್ಲಿ ರಾಜನು ಅಪತ್ಯ ಸಂಭ್ರಮದಲ್ಲಿ ಲೋಲಾಡುತ್ತಿದ್ದನು. ಆತನ ಸಂತೋಷವನ್ನು ಕಂಡು ಸಕಲ ಸೈನಿಕರಿಗೂ ಪರಮಾನಂದವಾಯಿತು. ರಾಜನಂದಿನಿಯು ಸಮಸ್ತ ಸಂಗತಿಯನ್ನು ತಿಳಿದು ಸೇನಾಪತಿಯು ಅಜಯಸಿಂಹ ಗುಪ್ತಚರನನ್ನು ಬಹಳವಾಗಿ ಶ್ಲಾಘಿಸಿದನು.

ರಾಜನು ಮೋಹನಪುರಿಗೆ ಬಂದಕೂಡಲೆ ಸೌರಾಷ್ಟ್ರ ರಾಜನಿಗೆ ಆತನ ಮಗಳ ವೃತ್ತಾಂತವನ್ನು ಸವಿಸ್ತಾರವಾಗಿ ಬರೆದು ತಿಳಿಸಿದ್ದನು. ಆ ರಾಜನಾದರೂ ತನಗಿರುವ ಓರ್ವ ಪುತ್ರಿಯು ಇಲ್ಲದಂತಾದದ್ದಕ್ಕೆ ಮರಣಾಂತವಾದ ದುಃಖವನ್ನನುಭವಿಸುತ್ತಿದ್ದನು. ಅವನು ಎಷ್ಟು ಪ್ರಯತ್ನಿಸಿದ್ದರೂ ಮಗಳ ಮುಖವು ಆತನಿಗೆ ಲಭಿಸದೆ ಹೋಗಿತ್ತು. ಇಂದು ಮೋಹನಪುರಿಯಿಂದ ಬಂದ ದೂತನಿಂದ ಮಗಳ ವೃತ್ತಾಂತವು ತಿಳಿಯಲು ಆತನು ಸಂಭ್ರಮಪಟ್ಟು ದೂತನಿಗೆ ಅನೇಕಬಗೆಯ ಜರತಾರಿಪೋಷಾಕಗಳನ್ನು ಪಾರಿತೋಷಕವಾಗಿಕೊಟ್ಟು ಸಕಲವೈಭವದೊಡನೆ ಮೋಹನಪುರಿಗೆ ಹೊರಟನು. ಮಿಥಿಲಾರಾಜನು ಸಮಸ್ತ ಪರಿವಾರದೊಡನೆ ರಾಜಧಾನಿಗೆ ಹೊರಡುಬೇಕೆನ್ನುವಷ್ಟರಲ್ಲಿ ಸೌರಾಷ್ಟ್ರ ರಾಜನು ಅಲ್ಲಿಗೆ ಬಂದನು. ಪರಸ್ಪರರ ಸಂದರ್ಶನದಿಂದ ಪರಸ್ಪರರಿಗೆ ಆನಂದವಾಯಿತು. ಸೌರಾಷ್ಟ್ರ ರಾಜಪುತ್ರಿಯು ತಂದೆಯನ್ನು ನಮಸ್ಕರಿಸಿ ತನ್ನ ಕ್ಷೇಮವನ್ನು ತಿಳಿಸಿದಳು. ಬಳಿಕ ಸರ್ವರೂ ಮಿಥಿಲಾನಗರಿಗೆ ದಯಮಾಡಿಸಿದರು.

ರಾಜನಂದಿನಿಯು ಆಗಮನದಿಂದ ಮಿಥಿಲಾನಗರಿಯು ಕಲಾಪೂರ್ಣವಾಯಿತು. ಚಂದ್ರೋದಯದಿಂದ ಗಗನಮಂಡಲವು ಶೋಭೆಗೊಳ್ಳುವಂತೆಯೂ, ಕುಂಕುಮ ತಿಲಕದಿಂದ ಸ್ತ್ರೀಮುಖವು ಮಂಗಲಕರವಾಗಿ ತೋರುವಂತೆಯೂ ಮಿಥಿಲಾನಗರಿಯು ಆನಂದಪೂರ್ಣವಾಗಿ ತೋರಿತು. ರಾಜಾಜ್ಞೆಯಂತೆ ಪಟ್ಟಣದಲ್ಲೆಲ್ಲ ತಳಿರು ತೋರಣಗಳು ಒಪ್ಪುತ್ತಿದ್ದವು. ದೇವಸ್ಥಾನಗಳು ಸಾರಣೆಗಳಿಂದ ಭವ್ಯವಾಗಿ ತೋರಲಾರಂಭಿಸಿದವು. ರಾಜಬೀದಿಗಳು ಸೌಗಂಧಿಕ ಪದಾರ್ಥಗಳ ಮಿಶ್ರಣದ ಧಳಿಯಿಂದ ಘಮಘಮಿಸುತ್ತಿದ್ದವು. ರಾಜಪರಿವಾರವು ನಗರಿಯ ಸಮೀಪಕ್ಕೆ ಬರಲು, ಸಮಸ್ತ ಪ್ರಜೆಗಳೂ ರಾಜನನ್ನೂ, ರಾಜನಂದಿನಿಯನ್ನೂ ಎದುಗೊಂಡರು.

ಬಳಿಕ ಪಟ್ಟಣದಲ್ಲಿ ರಾಜಪರಿವಾರವು ಪ್ರವೇಶಿಸಿತು. ರಾಜನಂದಿನಿಯೂ, ಸೌರಾಷ್ಟ್ರ ರಾಜಪುತ್ರಿಯೂ ದಾಸಿಯರಿಂದ ಪರಿವೃತವಾದ ರತ್ನಖಚಿತವಾದ ಆಂದೋಳನಗಳಲ್ಲಿ ಕುಳಿತುಕೊಂಡಿದ್ದರು. ರತ್ನಾಕರ ರಾಜಪುತ್ರನು ಸಿಂಗರಿಸಿದ ಪಟ್ಟದಾನೆಯ ಅಂಬಾರಿಯಲ್ಲಿ ಕುಳಿತುಕೊಂಡಿದ್ದನು. ಮಿಥಿಲಾ ರಾಜನೂ, ಸೌರಾಷ್ಟ್ರ ರಾಜನೂ ಬೇರೆ ಬೇರೆ ಆನೆಗಳ ಮೇಲೆ ಕುಳಿತುಕೊಂಡಿದ್ದರು. ಬಂದಿಗಳು ಮಾಗಧರು ಕೀರ್ತಿಗೀತೆಗಳನ್ನೂ ಪರಾಕ್ರಮವನ್ನೂ ಸಾರುತ್ತಿದ್ದರು. ಅಸಂಖ್ಯ ಜನ ರಜಪೂತರೂ, ಕಾಲಾಳುಗಳೂ ರಾಜಪರಿವಾರವನ್ನು ರಕ್ಷಿಸುತ್ತ ಸಾಗಿದ್ದರು.

ಈ ಚಂದದಿಂದ ಸಾಗಿರುವ ರಾಜಪರಿವಾರವನ್ನು ನೋಡಿ ಪೌರಜನರ ನೇತ್ರಗಳು ಸಫಲವಾದವು. ಎಷ್ಟೋ ಜನರು ಉಪ್ಪರಿಗೆಗಳನ್ನೇರಿ ರಾಜಪರಿವಾರದ ಮೇಲೂ, ರಾಜಪುತ್ರ ರತ್ನಾಕರನ ಮೇಲೂ ಪುಷ್ಪವೃಷ್ಟಿಯನ್ನು ಕರೆದರು. ರತ್ನಾಕರನ ಮನ್ಮಥನನ್ನು ಕೂಡಾ ತಿರಸ್ಕರಿಸುವಂಥ ಸುಂದರ ರೂಪವನ್ನೂ, ತಾರುಣ್ಯವನ್ನೂ, ತೇಜಸ್ಸನ್ನೂ ಕಂಡು ಪುರನಿವಾಸಿಗಳೆಲ್ಲ ಈತನೇ ನಮ್ಮ ರಾಜನಂದಿನಿಗೆ ತಕ್ಕ ಪತಿಯೆಂದು ಮಾತನಾಡಿಕೊಳ್ಳಲಾರಂಭಿಸಿದರು. ಸಮಸ್ತ ಹೆಂಗಳೆಯರೂ ರಾಜಪುತ್ರ ರತ್ನಾಕರನ ಸುಂದರರೂಪವನ್ನು ಕೊಂಡಾಡಿದರು. ಹೀಗೆ ಪ್ರಜೆಗಳ ಆನಂದಕ್ಕೆ ಪಾತ್ರವಾದ ರಾಜಪರಿವಾರವು ಅರಮನೆಯ ಬಳಿಗೆ ಬಂದಿತು. ರಾಜಸ್ತ್ರೀಯರು ರಾಜಪುತ್ರ, ರತ್ನಾಕರನಿಗೂ, ರಾಜಪುತ್ರಿಯರಿಗೂ ಕರ್ಪೂರಾರತಿಯನ್ನು ಮಾಡಿ ಜನಗಳ ದೃಷ್ಟಿ ತಾಕಬಾರದೆಂದು ನಿವಾಳಿತೆಗೆದರು. ರಾಜಪುತ್ರನು ರಾಜಮಂದಿರವನ್ನು ಪ್ರವೇಶಿಸಿದನು. ಸಮಸ್ತ ರಾಜಪರಿವಾರವೂ ರಾಜಮಂದಿರವನ್ನು ಹೊಕ್ಕು, ತಮತಮಗುಚಿತವಾದ ಸ್ಥಾನದಲ್ಲಿ ವಿಶ್ರಮಿಸಿ, ಅಧಿಕವಾದ ಸೌಖ್ಯವನ್ನು ಹೊಂದಿತು.

* * * * * * * * * * * * * * *

ರಾಜನಂದಿನಿಯೂ, ಸೌರಾಷ್ಟ್ರರಾಜಪುತ್ರಿಯೂ ರತ್ನಾಕರರಾಜಪುತ್ರನನ್ನಲ್ಲದೆ ಬೇರೆ ಯಾರನ್ನೂ ಒಲಿಸುವದಿಲ್ಲೆಂದು ತಮ್ಮ ತಮ್ಮ ಜನಕರ ಮುಂದೆ ಅರುಹಿಬಿಟ್ಟಿದ್ದರಿಂದ ಮಿಥಿಲಾರಾಜನೂ, ಸೌರಾಷ್ಟ್ರರಾಜನೂ ರತ್ನಾಕರನನ್ನೇ ಅಳಿಯನನ್ನಾಗಿ ಮಾಡಿಕೊಳ್ಳಲು ಸಂತೋಷಪಟ್ಟರು. ಈ ಕ್ಷಾತ್ರವೀರನೇ ರಾಜಪುತ್ರಿಯರ ಪ್ರಾಣ ಹಾಗು ಶೀಲಗಳನ್ನು ರಕ್ಷಿಸಿದ್ದರಿಂದ ಈತನೇ ತಮ್ಮ ಅಳಿ

ಯನಾಗಲು ಅರ್ಹನೆಂದು ನಿಶ್ಚಯಿಸಿ ಅವಂತೀರಾಜನಿಗೆ ಅದರಂತೆ ವರ್ತಮಾನ ಕಳಿಸಲು ಆ ವೃದ್ಧರಾಜನು ಸಂತೋಷದಿಂದ ಸಕಲಪರಿವಾರದೊಡನೆ ಮಿಥಿಲಾ ನಗರಿಗೆ ಬಂದನು. ಸರ್ವರ ಅನುಮತಿಯಂತೆ ಶುಭಮುಹೂರ್ತದಲ್ಲಿ ರತ್ನಾಕರರಾಜಪುತ್ರನು ರಾಜನಂದಿನಿ ಹಾಗು ಸೌರಾಷ್ಟ್ರರಾಜಪುತ್ರಿಯರ ಪಾಣಿಗ್ರಹಣವನ್ನು ಮಾಡಿದನು. ಅವರಿಬ್ಬರೂ ರಾಜಪುತ್ರಿಯರು ಹಿಂದಿನ ಕಷ್ಟಗಳನ್ನೆಲ್ಲ ಮರೆತು ಸ್ವರ್ಗೀಯ ಸೌಖ್ಯದಲ್ಲಿ ಮಗ್ನರಾದರು. ರಾಜಪುತ್ರರತ್ನಾಕರನ ತಂದೆಯ ಹಾಗು ಇಬ್ಬರು ಮಾವಂದಿರ ರಾಜ್ಯಗಳಿಗೆ ಅಧಿಪತಿಯಾಗಿ ತನ್ನ ಪರಾಕ್ರಮದಿಂದ ಮುಂದೆ ಸಾರ್ವಭೌಮನಾದನು. ಸುಖ-ದುಃಖಗಳು ಚಕ್ರವತ್ ಪರಿವರ್ತನೆಯಾಗುತ್ತಿರುವವಲ್ಲವೇ?



ಸಂಪೂರ್ಣವಾದುದು.

ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ
ಅವರಿಂದ ಮುದ್ರಿಸಲ್ಪಟ್ಟಿತು.